ಶ್ರೀ

ಸಿದ್ಧಾಂತಕೀರ್ತಿ ಗ್ರಂಥಮಾಲೆಯ ತೃತೀಯ ಪುಷ್ಪ

# ಅಂತರಾತ್ಮ ದರ್ಶನ

## (ಜೀವನ — ಪಾವನ)

ಪ್ರಕಾಶಕರು :

ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ

ಶ್ರೀ ಹೊಂಬುಜ ಜೈನಮಠ,

ಶಿವಮೊಗ್ಗ ಜಿಲ್ಲೆ - (ಕರ್ನಾಟಕ)



ಸ್ವರ್ಗೀಯ

ಸ್ವಸ್ತಿ ಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳವರ ದಿವ್ಯಸ್ಮೃತಿಗಾಗಿ

ಶಾಸ್ತ್ರದಾನ

ಅಂತರಾತ್ಮ ದರ್ಶನ (ಜೀವನ - ಪಾವನ)

ಪ್ರಥಮ ಮುದ್ರಣ :
1978



ಪ್ರಕಾಶಕರು :
ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ,
ಶ್ರೀ ಹೊಂಬುಜ ಜೈನಮಠ,
ಶಿವಮೊಗ್ಗ ಜಿಲ್ಲೆ – (ಕರ್ನಾಟಕ)

ಲೇಖಕರು :
ಜ್ಯೋತಿಷಿ ಯಂ. ಜಗತ್ಪಾಲಯ್ಯ

ಮುದ್ರಕರು :
ಜಯ ಪ್ರಿಂಟರ್ಸ್, ಮೂಡುಬಿದಿರೆ

ಪ್ರತಿಗಳು :
1,501

ಬೆಲೆ :
ಶಾಸ್ತ್ರದಾನ



ಪುಸ್ತಕ ದೊರೆಯುವ ಸ್ಥಳ :
ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ,
ಶ್ರೀ ಹೊಂಬುಜ ಜೈನಮಠ,
ಶಿವಮೊಗ್ಗ ಜಿಲ್ಲೆ – (ಕರ್ನಾಟಕ)

ಭಗವಾನ್ ಶ್ರೀ ಪಾರ್ಶ್ವನಾಥ ಸ್ವಾಮಿ.



ಮಹಾತಾಯಿ ಶ್ರೀ ಪದ್ಮಾವತಿ ಅಮ್ಮ.



# ಶುಭಾಶೀರ್ವಾದಗಳು

ಸ್ವರ್ಗೀಯ ಸ್ವಸ್ತಿ ಶ್ರೀ ಪಾರ್ಶ್ವಕೀರ್ತಿ ಸ್ವಾಮೀಜಿಯವರ ದಿವ್ಯಸ್ಮೃತಿಗಾಗಿ "ಅಂತರಾತ್ಮದರ್ಶನ"ವೆಂಬ ಈ ಕಿರುಹೊತ್ತಿಗೆಯನ್ನು ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆಯ ತೃತೀಯ ಪುಷ್ಪವಾಗಿ ಪ್ರಕಟಿಸಲು ನಮಗೆ ಸಂತೋಷವಾಗುತ್ತಿದೆ. ಪೂಜ್ಯ ಸ್ವಸ್ತಿ ಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳವರು ಜೈನದರ್ಶನದ ಮಹಾನ್ ವಿದ್ವಾಂಸರಾಗಿದ್ದರು. ಮಾತ್ರವಲ್ಲದೆ ಸುಮಾರು ಎಂಬತ್ತಾರು ವರ್ಷಗಳ ತನ್ನ ಸುದೀರ್ಘ ಜೀವಿತ ಕಾಲವನ್ನು ಜಪ, ತಪ, ಸ್ವಾಧ್ಯಾಯಗಳಲ್ಲೇ ಕಳೆದು ಪರಮ ಚಾರಿತ್ರವಂತರಾಗಿ ಕೀರ್ತಿಶೇಷರಾದವರು. ಅಂತಹ ಭವ್ಯಾತ್ಮರ ಸ್ಮರಣೆಯು ನಮ್ಮೆಲ್ಲರ ಸ್ಮೃತಿಪಟಲಗಳಲ್ಲಿ ಚಿರಕಾಲ ಉಳಿಯಬೇಕೆಂಬ ಸದುದ್ದೇಶದಿಂದ ಈ ಪುಸ್ತಕವನ್ನು ಪ್ರಕಟಿಸುತ್ತಿದ್ದೇವೆ. ಆದರಣೀಯ ಶ್ರಾವಕ, ಶ್ರಾವಿಕೆಯರೆಲ್ಲರೂ ಇದನ್ನು ಸ್ವಾಧ್ಯಾಯ ಮಾಡಿ ಆತ್ಮಜ್ಞಾನಿಗಳಾಗಬೇಕೆಂದು ಆಶಿಸುತ್ತೇವೆ.

ಭದ್ರಂ ಭೂಯಾತ್ । ವರ್ಧತಾಂ ಜಿನಶಾಸನಂ ॥

ಇತೀ ಶುಭಾಶೀರ್ವಾದಗಳು

ಮೊಕ್ಕಾಂ:

ಭಗವಾನ್
ಶ್ರೀ ನೇಮೀಶ್ವರ ಸ್ವಾಮಿ
ಶ್ರೀ ಪಾದಮೂಲ
ಶ್ರೀ ವರಂಗ ಕ್ಷೇತ್ರ,
ದಕ್ಷಿಣ ಕನ್ನಡ ಜಿಲ್ಲೆ
ಕರ್ನಾಟಕ
ದಿನಾಂಕ: 6—10—1978

ಸ್ವಸ್ತಿ ಶ್ರೀ ದೇವೇಂದ್ರಕೀರ್ತಿ
ಭಟ್ಟಾರಕ ಸ್ವಾಮಿಗಳವರು
ಅಧ್ಯಕ್ಷರು ಮತ್ತು
ಪ್ರಧಾನ ಸಂಪಾದಕರು
ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ,
ಶ್ರೀಹೊಂಬುಜ ಜೈನ ಮಠ
ಶಿವಮೊಗ್ಗ ಜಿಲ್ಲೆ - ಕರ್ನಾಟಕ

# ಮುನ್ನುಡಿ

ಜೈನ ಸಾಹಿತ್ಯವು ಅತ್ಯಂತ ವಿಶಾಲವಾದದ್ದೆಂದು ಜಗಜ್ಜನಿತವಾದ ವಿಷಯವಾಗಿದೆ. ಜೈನ ಧರ್ಮ ಭಕ್ತರಾದ ವಿದ್ವಾಂಸರು ಯತಿಗಳು ನಾನಾ ವಿಧವಾದ ಕೃತಿಗಳನ್ನು ರಚಿಸಿರುವರು. ಈ ಗ್ರಂಥದಲ್ಲಿರುವ ಅಂತರಾತ್ಮದರ್ಶನವು ಸಕಲರಿಗೂ ಇಹ ಪರ ಸುಖವನ್ನೀಯುತಕ್ಕದ್ದಾಗಿದೆ. ಈ ಪುಸ್ತಕದ ಮಹತ್ವವು ಕೇವಲ ನಾಮ ಮಾತ್ರದಿಂದಲೇ ವ್ಯಕ್ತವಾಗುವುದು. "ಭಾವನಾ ಭವ ನಾಶಿನೀ"ಯೆಂಬ ವಚನದಂತೆ ಈ ಸಂಸಾರ ಸಮುದ್ರವನ್ನು ಪಾರ ಹೊಂದುವುದಕ್ಕೆ ಅಂತರಾತ್ಮ ಭಾವನೆಯು ಹಡಗಿನಂತಿರುವುದು. ಭವ್ಯರು, ನಿತ್ಯ ಸ್ವಲ್ಪ ಸಮಯವಾದರೂ ಅಂತರಾತ್ಮ ಧ್ಯಾನದ ಕಡೆಗೆ ಲಕ್ಷ್ಯಕೊಟ್ಟು ಭಾವಿಸಿದರೆ ಸಾಕು.

ಈ ಪ್ರಪಂಚದಲ್ಲಿ ಪ್ರತೀ ಒಂದು ಪ್ರಾಣಿಯೂ ಸುಖಕ್ಕೋಸ್ಕರ ಪ್ರಯತ್ನ ಮಾಡುತ್ತಿರುವುದು. ಆದರೆ ನಿಜವಾದ ಸುಖದ ತಿಳುವಳಿಕೆಯಿಲ್ಲದೆ ದುಃಖವನ್ನೇ ಹೊಂದುವುದು ಕಂಡುಬರುತ್ತದೆ.

ಪ್ರಾಜ್ಞರು ಸಾಧು ಸಜ್ಜನರ ಸಹವಾಸದಿಂದಲೂ ಸನ್ಮಾರ್ಗಾನುಷ್ಠಾನ ಶ್ರವಣದಿಂದಲೂ, ಶಾಸ್ತ್ರಗ್ರಂಥಗಳ ಪಠನದಿಂದಲೂ ಸಮ್ಯಜ್ಞಾನವು ಪ್ರಾಪ್ತವಾಗುವುದೆಂದು ಹೇಳಿರುತ್ತಾರೆ. ಆದ್ದರಿಂದ ತತ್ವಗ್ರಂಥಗಳ ಪಠನವೂ ಸನ್ಮಾರ್ಗಪ್ರದರ್ಶಕವಾದ ಆತ್ಮಕಲ್ಯಾಣಕ್ಕೆ ಸಾಧಕವಾದ ಸಮ್ಯಕ್‌ಜ್ಞಾನದ ಉತ್ಪತ್ತಿಗೆ ಸಹಕಾರಿ ಕಾರಣವೆಂದರೂ ತಪ್ಪಾಗದು.

ಆತ್ಮನ ಶುಭಾಶುಭ ಭಾವನೆಗಳಿಂದ ಪುಣ್ಯ-ಪಾಪಗಳು ಬಂಧವಾಗುತ್ತದೆಂದು ಶಾಸ್ತ್ರಗಳಿಂದ ತಿಳಿದುಬರುತ್ತದಷ್ಟೆ? ಜೈನ ಸಿದ್ಧಾಂತದ ಪ್ರಕಾರ ಆತ್ಮನಲ್ಲಿ ಕರ್ಮಗಳು ಬಂದುಸೇರುತ್ತವೆ. "ಶುಭಃ ಪುಣ್ಯಶ್ಯ ಶುಭಃ ಪಾಪಸ್ಯೆ"ಯೆಂದು ಆಚಾರ್ಯರು ಹೇಳಿರುವಂತೆ, ಶುಭಯೋಗದಿಂದ ಪುಣ್ಯಕರ್ಮಾಣುಗಳೂ, ಅಶುಭಯೋಗದಿಂದ ಪಾಪಕರ್ಮಾಣುಗಳೂ ಆತ್ಮನಿಗೆ ಅಂಟುತ್ತವೆ. ಮನೋಕ್ಕಾಯ ವ್ಯಾಪಾರ ರೂಪವಾದ ಯೋಗದಲ್ಲಿ, ಪಾಪಪುಣ್ಯಗಳ ಬಂಧನಕ್ಕೂ, ವಿಮೋಚನೆಗೂ ಮನೋಯೋಗವು ಮುಖ್ಯ ಕಾರಣವಾಗಿದೆ. ಯೋಗವನ್ನು ಒಂದು ವಿಷಯದಲ್ಲಿ

ಸ್ಥಿರಗೊಳಿಸುವುದಕ್ಕೆ, ಚಿಂತಿಸುವುದಕ್ಕೆ ಧ್ಯಾನವೆಂದೂ, ಯೋಗವೆಂದೂ ಹೇಳುತ್ತಾರೆ. ಎಲ್ಲಾ ಆಸ್ತಿಕ ದರ್ಶನಗಳೂ ಆತ್ಮನ ಅಸ್ತಿತ್ವವನ್ನೂ ಒಪ್ಪಿಕೊಳ್ಳುತ್ತವೆ. ಅಲ್ಲದೆ ತಮ್ಮ ತಮ್ಮ ದೃಷ್ಟಿಯಿಂದ ಆತ್ಮನ ಸ್ವರೂಪವನ್ನೂ ವಿವರಿಸುತ್ತವೆ. ಇದು ದಾರ್ಶನಿಕ ವಿಚಾರವಾಯಿತು. ಆದರೆ ಇಂದು ನಾವು ಆತ್ಮನನ್ನು ಕಾಣುವ ಬಗೆಯೇನು? ಈ ಪ್ರಶ್ನೆಯನ್ನೂ ಇಂದಿನ ವಿಚಾರವಾದಿಗಳು ಮಾಡಬಹುದು. ಆದರೆ ಎಲ್ಲಾ ಪದಾರ್ಥಗಳನ್ನೂ ಕಂಡೇ ತೀರುವುದೆಂದರೆ ಸಾಧ್ಯವಾಗದ ಮಾತು. ಸಾಧ್ಯವೂ ಇಲ್ಲ. ಕಬ್ಬನ್ನು ಕಾಣಬಹುದು. ತಿಂದು ಸಿಹಿ ಅನುಭವಿಸಬಹುದು. ಆದರೆ ಸಿಹಿಯನ್ನು ಕಾಣಲು ಅಸಾಧ್ಯವಷ್ಟೆ? ಸೃಷ್ಟಿಯೊಳಗಿನ ಅನೇಕ ಪದಾರ್ಥಗಳು ಅನುಭವವೇದ್ಯವಾಗಿರುವುವು. ಅಂಥಹ ವಸ್ತುಗಳಲ್ಲಿಯೇ ಆತ್ಮವೆಂಬುದೂ ಸಮಾವೇಶವಾಗುವುದು. ಆದ್ದರಿಂದ ಆತ್ಮನನ್ನು ಅನುಭವದಿಂದ ಕಂಡುಕೊಳ್ಳಬೇಕು. ಆ ವಿಚಾರವಾಗಿ ಆತ್ಮಾನುಭವದ ವಿವರಣೆಯನ್ನು ಲೇಖಕರು ಚೆನ್ನಾಗಿ ಮಾಡಿದ್ದಾರೆ.

ಜೈನಧರ್ಮವು ಆತ್ಮೋನ್ನತಿಗಳಿಗೆ ಬಹಳ ಮಹತ್ವ ಕೊಟ್ಟಿದೆ. ಆತ್ಮಸ್ವರೂಪದಲ್ಲಿ ನಿಲ್ಲುವುದೇ ಸಿದ್ಧಪದವಾಗಿದೆ. ಈ ಪದದ ಪ್ರಾಪ್ತಿಗಾಗಿಯೇ ಜೈನದರ್ಶನ ಸಮ್ಯಕ ಜ್ಞಾನ, ದರ್ಶನ, ಚಾರಿತ್ರಗಳ ಕ್ರಮದ ವಿಕಾಸವಾಗಿದೆ. ಧ್ಯಾನ, ಆತ್ಮಧ್ಯಾನ ಎನ್ನುವಂತಹುದು ಅನುಭವವೇದ್ಯವಾಗುವಂತಹ ವಿಷಯು. ಲೇಖಕರ, ಧ್ಯಾನಪದ್ಧತಿ, ಧ್ಯಾನಸ್ವರೂಪದ ಬಗ್ಗೆಯೂ, ಕೆಲವು ಸ್ಥೂಲ ವಿಚಾರಗಳನ್ನು ಚಿತ್ರಿಸಿರುತ್ತಾರೆ. ಪರಮಾತ್ಮ ಸಾಧನೆಯಲ್ಲಿ ಧ್ಯಾನಕ್ಕೆ ಬಹಳ ಮಹತ್ವ ಉಂಟು.

ನೀತಿ, ಆತ್ಮವಿಚಾರ ಮೊದಲಾದ ಸದ್ವಿಷಯುಗಳು ಭೋಧಕಗಳಾದ ಗ್ರಂಥಗಳ ಪಠನವೇ ಪ್ರತೀ ಒಬ್ಬನಿಗೂ ಒಳ್ಳೆಯದನ್ನು ಮಾಡುತ್ತದೆ. ಆ ವಿಷಯುಗಳು ಈ ಪುಸ್ತಕದಲ್ಲಿ ತುಂಬಿವೆ. ಆದ್ದರಿಂದಲೂ, ದಿ। ಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳು ಯಾವಾಗಲೂ ಶರೀರ ಮೋಹವನ್ನು ತ್ಯೊರೆದು, ಆತ್ಮಧ್ಯಾನದಲ್ಲಿ ನಿರತರಾಗಿದ್ದರಿಂದಲೂ ಈ ಪುಸ್ತಕವು ಅವರ ಸ್ಮಾರಕಕ್ಕೆ ಸೂಕ್ತವೆಂದು ನನಗೆ ತೋರಿದ ಕಾರಣ, ಪುಸ್ತಕವನ್ನು ಬರೆದ ಯಂ. ಜಗತ್ಪಾಲಯ್ಯನವರಿಂದ ಪಡೆದು ಸ್ವಸ್ತಿಶ್ರೀ ದೇವೇಂದ್ರಕೀರ್ತಿ

ಸ್ವಾಮೀಜಿಯವರಿಗೆ ತೋರಿಸಿದೆ. ಅವರೂ ಪುಸ್ತಕದ ಬಗ್ಗೆ ಒಳ್ಳೆಯ ಅಭಿಪ್ರಾಯಪಟ್ಟು ಪ್ರಕಾಶಪಡಿಸುವ ಬಗ್ಗೆ ಒಪ್ಪಿಗೆ ಕೊಟ್ಟಿರುವರು.

ಜೈನಶಾಸ್ತ್ರದಲ್ಲಿ ದಾನಗಳಲ್ಲಿ, ಶಾಸ್ತ್ರದಾನವೂ ಪುಣ್ಯ ಸಂಪಾದನೆಯ ಮಾರ್ಗವೆಂದಿದ್ದಾರೆ. ಶಾಸ್ತ್ರದಾನಕ್ಕಾಗಿ ಮಾಡಿಸಿದ ಈ ಗ್ರಂಥದ ಪ್ರಕಾಶನ ವ್ಯಯವನ್ನು ವಹಿಸಿಕೊಂಡದ್ದಕ್ಕಾಗಿ ಜೈನಸಮಾಜವು ಶ್ರೀ ದೇವೇಂದ್ರಕೀರ್ತಿ ಸ್ವಾಮೀಜಿಯವರಿಗೆ ಚಿರಋಣಿಯಾಗಿರುತ್ತದೆ.

ಸ್ವ. ಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳವರ ಆತ್ಮಶಾಂತಿಗಾಗಿ ಮಾಡಿಸುವ ಅಭಿಷೇಕದ ಸಮಯದಲ್ಲಿ ಈ ಪುಸ್ತಕವನ್ನು ಶಾಸ್ತ್ರದಾನ ಮಾಡಿರುವುದು ಸ್ತುತ್ಯವಾದುದಾಗಿದೆ. ಯಾಕೆಂದರೆ ಪಾರ್ಶ್ವಕೀರ್ತಿಗಳು ಸರಳ ಮನಸ್ಸಿನ ಭಕ್ತಿಭಾವದ ಆಸ್ತಿಕರು, ಧರ್ಮಾಭಿಮಾನಿಗಳು ವಿದ್ಯಾವಂತರು, ಶಾಸ್ತ್ರಾದಿಗಳನ್ನು ಅಭ್ಯಾಸ ಮಾಡಿ ಅನುಷ್ಠಾನಕ್ಕೆ ತಂದವರು. ನಡತೆಯ ಮೂಲಕ ಧರ್ಮವನ್ನು ಅರಿತವರು. ಸ್ವಾಮಿಗಳು ತಮ್ಮ ಗೃಹಸ್ಥಾಜೀವನದಲ್ಲಿ ಸ್ವಗೃಹದಲ್ಲಿದ್ದರೂ ಸಂಸಾರ ಭೋಗಗಳಿಗೊಳಗಾಗದೆ, ವಿರಕ್ತರಾಗಿ ಸದಾಕಾಲ ಧರ್ಮಮಾರ್ಗದಲ್ಲಿ ನಿರತರಾಗಿದ್ದರು. ಅವರ ಧಾರ್ಮಿಕ ಪ್ರೀತಿಯು ನಮಗೆಲ್ಲರಿಗೂ ಮಾರ್ಗದರ್ಶಕವಾಗಿತ್ತು. ಅವರು ಅನಾರೋಗ್ಯರಾಗಿದ್ದ ಕೆಲವು ದಿವಸಗಳಲ್ಲಿಯೂ, ಸದಾ ಧರ್ಮತತ್ಪರರಾಗಿ ಯಾವಾಗಲೂ ಮಂತ್ರ ಶ್ರವಣ, ನಿರತರಾಗಿದ್ದರು. ಆತ್ಮನು ಸ್ಥಿರವಾದವನು. ಅವಿನಾಶಿ, ಜ್ಞಾನಮಯಿಯೆಂಬ ಶುದ್ಧ ಭಾವನೆಯಲ್ಲೇ ಇದ್ದರು. ಆವರ ಮನೋಭಾವದಿಂದ ಅವರಿಗೆ ಸಾಯುವುದರಲ್ಲಿ ಅಂಜಿಕೆಯಿದ್ದಂತೆ ಕಾಣುತ್ತಿರಲಿಲ್ಲ. ತನಗೆ ಸಂಬಂದಪಟ್ಟ ಎಲ್ಲಾ ವಿಚಾರಗಳಲ್ಲಿಯೂ ಪೂರ್ಣ ವೈರಾಗ್ಯಭಾವದಿಂದಿದ್ದರು. ಅಂತ್ಯವು ಸಮೀಪಿಸಲು, ತನಗೆ ಆತ್ಮಚಿಂತನೆಗೆ ಭೋದನೆ ಮಾಡಿದುದನ್ನು ಶಾಂತ ರೀತಿಯಿಂದ ಕೇಳುತ್ತಾ ಸಲ್ಲೇಖನಾ ವಿಧಿಪೂರ್ವಕ, ಸಮಾಧಿ ಮರಣವನ್ನೈದಿದರು.

ವಿಷಯ ಕಠಿಣವಾದರೂ ಧಾರ್ಮಿಕ ದೃಷ್ಟಿಯಿಂದ ಅಧ್ಯಾತ್ಮ ವಿಚಾರಗಳನ್ನು ತಿಳಿದುಕೊಳ್ಳುವವರಿಗೆ ಇದು ಕೈಗನ್ನಡಿಯಾಗಿದೆ. ಈ ದೃಷ್ಟಿಯಿಂದ ವಿಚಾರ ಮಾಡಲಾಗಿ ಶ್ರೀಯುತ ಯಂ. ಜಗತ್ಪಾಲರ

ಅಂತರಾತ್ಮದರ್ಶನ (ಜೀವನಪಾವನ)ಯೆಂಬ ಈ ಗ್ರಂಥವು ಕನ್ನಡ ಭಾಷೆಯಲ್ಲಿ ವಿಶಿಷ್ಟ ಹೆಮ್ಮೆಯ ಸ್ಥಾನವನ್ನು ದೊರಕಿಸುವುದೆಂದು ಹೇಳಲು ನನಗೆ ಸಂಕೋಚವಿಲ್ಲ. ಶ್ರೀಯುತರು ಪರಿಶೋಧಿಸಿ ಬರೆದಿರುವ ಈ ಗ್ರಂಥವು ಜನತೆಯ ಪ್ರೀತಿಯನ್ನು ಸಂಪಾದಿಸಿ ಸಮಾಜದ ಆದರಕ್ಕೆ ಪಾತ್ರವಾಗಬಹುದು. ಪುಸ್ತಕವನ್ನು ಸಕಾಲದಲ್ಲಿ ಒದಗಿಸಿಕೊಟ್ಟಿರುವ ಯಂ. ಜಗತ್ಪಾಲಯ್ಯನವರಿಗೆ ಧನ್ಯವಾದಗಳು.

ಸ್ವ. ಶ್ರೀ ಪಾರ್ಶ್ವಕೀರ್ತಿ ಸ್ವಾಮೀಜಿಯವರ ಅಂತಿಮ ಸಮಯದಲ್ಲಿ ತಮ್ಮ ಎಲ್ಲಾ ಕಾರ್ಯಕ್ರಮಗಳನ್ನು ರದ್ದುಪಡಿಸಿ, ವರಂಗದಲ್ಲಿಯೇ ನೆಲಸಿ, ಸುವ್ಯವಸ್ಥೆಯೊಡನೆ ಸ್ವಾಮಿಗಳ ಸದ್ಗತಿಗೆ ಕಾರಣಕರ್ತರಾದ, ಹುಂಬುಚ್ಚ ಮಠದ ಶ್ರೀ ದೇವೇಂದ್ರಕೀರ್ತಿ ಸ್ವಾಮೀಜಿಯವರ ಸದ್ಧರ್ಮಪ್ರೇಮವನ್ನು ಸಮಾಜ ಎಂದಿಗೂ ಮರೆಯುವಂತಿಲ್ಲ. ಅವರಿಗೆ ನಾವುಗಳೆಲ್ಲರೂ ತುಂಬಾ ಕೃತಜ್ಞರಾಗಿದ್ದೇವೆ. ಸ್ವರ್ಗೀಯ ಶ್ರೀ ಪಾರ್ಶ್ವಕೀರ್ತಿಯವರ ಸ್ಮರಣಾರ್ಥವಾಗಿ ಹುಂಬುಚ್ಚ ಮಠಾಧೀಶರಾದ ದೇವೇಂದ್ರಕೀರ್ತಿ ಸ್ವಾಮಿಗಳು ಇದನ್ನು ಪ್ರಕಾಶಪಡಿಸಿರುವ ಕಾರಣ ಈ ಗ್ರಂಥಕ್ಕೆ ಒಂದು ಅಪೂರ್ವ ಕಳೆ ಬಂದಿದೆಯೆಂದರೂ ತಪ್ಪಾಗದು.

ಸನ್ಮಾನ್ಯ ಶಿಶುಪಾಲ ಶಾಸ್ತ್ರಿಗಳು ಸ್ವಾಮೀಜಿಯವರ ಜೀವನ ಚರಿತ್ರೆಯನ್ನು ಬರೆದುಕೊಟ್ಟು ನಮಗೆ ಉಪಕರಿಸಿದ್ದಾರೆ. ಇವರಿಗೆ ಅನೇಕ ಧನ್ಯವಾದಗಳು.

ಈ ಗ್ರಂಥವನ್ನು ಸುಂದರವಾಗಿ ಸಕಾಲದಲ್ಲಿ ಮುದ್ರಿಸಿಕೊಟ್ಟ ಜಯ ಮುದ್ರಣಾಲಯ ಮೂಡುಬಿದಿರೆ ಇವರಿಗೂ ಧನ್ಯವಾದಗಳು.

ಜನತೆಯಲ್ಲಿ ಸದ್ಧರ್ಮ ಭಾವನೆಯನ್ನುಂಟುಮಾಡುವುದಕ್ಕೆ ನಾನಾ ರೀತಿಯಿಂದ ಸಹಕರಿಸಿದ ಎಲ್ಲರಿಗೂ ಅಭಿನಂದಿಸುತ್ತೇನೆ.

ಪರಮ ಪೂಜ್ಯ ಸ್ವರ್ಗೀಯ ಶ್ರೀ ಪಾರ್ಶ್ವಕೀರ್ತಿ ಸ್ವಾಮೀಜಿಯವರ ಧಾರ್ಮಿಕ ಪ್ರೀತಿಯು ನಮಗೆಲ್ಲರಿಗೂ ಮಾರ್ಗದರ್ಶಕವಾಗಿದ್ದು ನಮಗೆ ಅವರ ಶುಭಾಶೀರ್ವಾದ ನಿಃಶ್ರೇಯಸ ಸಾಧಕವಾಗಲೆಂದು ಆಶಿಸುವ.

ಯಂ. ಪಿ. ರವಿಕೀರ್ತಿ, ಮೂಡುಬಿದಿರೆ.

# ಪ್ರಸ್ತಾವನೆ

ಲೋಕದಲ್ಲಿರುವ ಪ್ರತಿಯೊಂದು ಜೀವಿಗಳು ಸುಖಾಪೇಕ್ಷಿಗಳಾಗಿರುವಾಗ ಮಾನವನು ಕೂಡಾ ಸುಖಾಪೇಕ್ಷಿಯಾಗಿರುವನೆಂದರೆ ಅತಿಶಯೋಕ್ತಿಯಾಗಲಾರದು. ಆದರೆ, ಆ ಸುಖದ ಮೂಲ ಯಾವುದೆಂದು ತಿಳಿಯುವುದು ಮುಖ್ಯ ಕರ್ತವ್ಯ,

ಇಂದಿನ ಹೆಚ್ಚಿನ ಜನಾಂಗವು ತಮ್ಮ ಸುಖಾಭ್ಯುದಯಕ್ಕಾಗಿ, ಮಾಡುವ ಸಾಧನೆಯು ಸುಖ (ಆನಂದ)ದ ವಿರುದ್ಧವಾದ ದುಃಖ, ವ್ಯಸನಗಳಿಗೆ ಬಲಿಯಾಗುತ್ತಿರುವ ದೃಶ್ಯವು ವಿಚಾರಶೀಲರ, ಕಣ್ಣಿಗೆ ಕಾಣುತ್ತ ಇದೆ. ಹೀಗಾಗಲು ಕಾರಣವೇನು? ಎಂದು ವಿಚಾರಿಸಿ, ವಿಮರ್ಶೆಮಾಡಿದಾಗ "ಬಾಯಾರಿಕೆ ನೀಗಲು ಉಪ್ಪುನೀರು ಕುಡಿಯುವವನಂತೆ" "ಪೂರ್ವಕ್ಕಿರುವ ಪಟ್ಟಣವನ್ನು ಸೇರಲು ಪಶ್ಚಿಮ ದಿಕ್ಕಿಗೆ ಮುಖಮಾಡಿ ಹೊರಟ ಮನುಷ್ಯನಂತೆ" ಆಗಿರುವುದೆಂದರೆ ತಪ್ಪಾಗಲಾರದು.

ನಮ್ಮ "ಜೀವನ-ಪಾವನ" ಆಗಬೇಕಾದರೆ ತನ್ನ "ಅಂತರಾತ್ಮ-ದರ್ಶನ"ವೇ ಪ್ರಧಾನಸಾಧನವೆಂದು ಹಿಂದಿನ ಮಹಾಮಹಿಮ ಜ್ಞಾನಿಗಳೂ, ಮಹಾಪುರುಷರೂ, ಮಹಾತ್ಮರೂ ಆಗಾಗ ಜನ್ಮವೆತ್ತಿ ಬಂದು ಉಪದೇಶಮಾಡಿರುವರು. ಮಾತ್ರವಲ್ಲ, ಮುಂದಿನ ಜನಾಂಗದ ಅಭ್ಯುದಯಕ್ಕಾಗಿ ಗ್ರಂಥಗಳ ರೂಪವಾಗಿ ಬರೆದೂ, ಬರೆಯಿಸಿಯೂ ಇಟ್ಟಿರುವರು. ಮತ್ತು, "ತನಗೆ ತಾನೇ ಸುಖಿ" "ತನಗೆ ತಾನೇ ದುಃಖಿ" ಎಂದು ಒತ್ತೊತ್ತಿ ಹೇಳಿರುವರು. ಇಷ್ಟೇ ಅಲ್ಲ ನಾನು? ನಾನಾರು? ನಾನು ಎಲ್ಲಿಂದ ಬಂದವನು? ಮುಂದೆ ನಾನೆಲ್ಲಿಗೆ ಹೋಗುವೆನು? ಇದಕ್ಕಾಗಿ ನಾನು ಮಾಡಬೇಕಾದುದೇನು? ಎಂಬುದನ್ನು ಪ್ರತಿಯೊಬ್ಬನೂ ದಿನನಿತ್ಯವೂ ವಿಚಾರಿಸಿ, ವಿಮರ್ಶೆಮಾಡುತ್ತಿರಬೇಕೆಂದು ಹೇಳಿರುವರು. ಇದೇ — "ಅಂತರಾತ್ಮ-ದರ್ಶನ" ಹಾಗೂ "ಜೀವನ-ಪಾವನ" — ಎಂದಾಗಿದೆ. ಇದು ಹೇಗೆ?—

ದಿನಕ್ಕೊಂದು ಗಳಿಗೆಯಾನುಂ । ಜಿನನಾಕಾರದೊಳು ತನ್ನ ನಿಜವಂ ಕಾಣ್ಬಗೆ ॥
ಜನಿಸಿಹ ಕರ್ಮಸಮೂಹಂ । ದಿನಕರನುದಯದೊಳು ಪರಿವ ಕತ್ತಲೆಗೆ ಸಮಂ ॥

ಹಸುವಿನ ಮಾಂಸ ಮತ್ತು ರಕ್ತಮಯವಾದ ಕೆಚ್ಚಲಿನಲ್ಲಿ ಅಮೃತ ಸಮಾನವಾದ ಹಾಲು ಹೇಗಿರುವುದೋ, ಅದರಂತೆಯೆ "ನಾನು"— ಎಂಬುವ "ಆತ್ಮ"ನು ಜಡದೇಹ ಹಾಗೂ ಕರ್ಮದೊಡನೆ ಬೆರೆತಿರುವೆನೆಂದೂ. ನಾನು (ಆತ್ಮ) ಎಂಬವನೇ ಬೇರೆ, ಶರೀರ (ಪುದ್ಗಲ)ವೇ ಬೇರೆ ಎಂದು ದೃಢವಾಗಿ ತಿಳಿಯುತ್ತಾ ಇದಕ್ಕಾಗಿ ದಿನಕ್ಕೆ ಒಂದು ಗಳಿಗೆ (24 ನಿಮಿಷ - ಕಡಿಮೆಪಕ್ಷ) ಆದರೂ ತನ್ನ, "ಅಂತರಾತ್ಮ-ದರ್ಶನ" ಮಾಡುತ್ತಿರಬೇಕು.

ಶುದ್ಧಸ್ಫಟಿಕದ ಶಿಲೆಯೊಳ್ । ತಿದ್ದಿದ ಜಿನಬಿಂಬದಂತೆ ತನ್ನಂಗದೊಳುಂ ॥
ಶುದ್ಧಾತ್ಮನನ್ನು ಭಾವಿಸೆ । ಬದ್ಧವಾಗಿಹ ಕರ್ಮವಾಗಲೇ ಕಿಡುಗುಂ ॥

ಎಂಬಂತೆ ತನ್ನ ಆತ್ಮನನ್ನು ಪರಿಶುದ್ಧನೆಂದು ತಿಳಿದು ತನ್ನ ಹೃದಯದಲ್ಲಿ ಧ್ಯಾನಿಸುತ್ತಿರಬೇಕು. ಇದಕ್ಕಾಗಿ, ನಾವು ಏನು ಮಾಡಬೇಕು? ಹೇಗೆ ಮಾಡಬೇಕು? ಎಂಬುದನ್ನು ಮುಂದಿನ ಪುಟಗಳಲ್ಲಿ ಓದಿ ತಿಳಿಯಿರಿ, ನೀವೂ ಮಾಡಿರಿ. ನಿಮ್ಮ ಅನುಭವವನ್ನು ಬೇರೆಯವರಿಗೂ ತಿಳಿಸಿರಿ.

ನಾನು ಈ ಗ್ರಂಥವನ್ನು "ಜ್ಞಾನಾರ್ಣವ" ಮೊದಲಾದ ಗ್ರಂಥಗಳನ್ನು ಓದಿ ತಿಳಿದು ಉಂಟಾದ ಅನುಭವವನ್ನು ಒಕ್ಕೂಟಗೊಳಿಸಿ ಬರೆದಿರುವೆನು. ಮಾತ್ರವಲ್ಲ, ಓದುಗರಿಗೆ ಸುಲಭವಾಗಿ ತಿಳಿಯಲೆಂದು, ಬೇಕುಬೇಕಾದ ಚಿತ್ರಗಳನ್ನೂ ಇದರಲ್ಲಿ ಸೇರಿಸಿರುವೆನು. ನನ್ನ ಅಭಿಪ್ರಾಯಕ್ಕೆ ಸರಿಯಾಗಿ ಹಾಗೂ ಪ್ರತಿಫಲಾಪೇಕ್ಷೆ ಇಲ್ಲದೆ ಈ ಚಿತ್ರಗಳನ್ನು ಬರೆದುಕೊಟ್ಟಿರುವ "ನಾಟ್ಯಕಲಾ ಪ್ರವೀಣ" "ಚಿತ್ರಕಲಾ ಪ್ರವೀಣ"ರಾದ ಶ್ರೀ ಮುರಲೀಧರ, ಮಂಗಳೂರು ಇವರಿಗೆ ಅನೇಕ ಧನ್ಯವಾದಗಳು.

ನಾನು ಬರೆದ ಈ "ಅಂತರಾತ್ಮ-ದರ್ಶನ" ವ "ಜೀವನ-ಪಾವನ" ಎಂಬುದಕ್ಕೆ ಪ್ರಬಲಸಾಕ್ಷಿಯಾಗಿದ್ದ ಸ್ವರ್ಗೀಯ "ಶ್ರೀ ಪಾರ್ಶ್ವಕೀರ್ತಿ

ಸ್ವಾಮಿಜೀಯವರು" — ಮೂಡುಬಿದಿರೆ ಇವರ ಸಂಸ್ಮರಣಾರ್ಥವಾಗಿ, ಹೊಂಬುಜ ಮಠದ ಶ್ರೀ ಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಸ್ವಾಮಿಜೀಯವರು ಮಾಡಿಸುವ "ಶಾಸ್ತ್ರದಾನ" ಇದಕ್ಕೆ ಆರಂಭದಲ್ಲಿಯೇ ಪ್ರಕಾಶಕ್ಕೆ ಬಂದಿರುವುದನ್ನು ಯೋಚಿಸಿದರೆ, ಸದ್ಧರ್ಮಪ್ರೇಮಿಯಾದ "ಜೈನಂಗೆ ವಿಸ್ಮಯಂ ನಾಸ್ತಿ" ಎಂಬುದು ದೃಢವಾಗುತ್ತದೆ.

ಈ ಗ್ರಂಥವನ್ನು ನೋಡಿ, ಓದಿ ತಿಳಿದ ಡಾ। ರವಿಕೀರ್ತಿ ಶೆಟ್ರು, ಮೂಡುಬಿದಿರೆ ಇವರು ಶಾಸ್ತ್ರದಾನಕ್ಕೆ ಇದೇ ಯೋಗ್ಯವೆಂದು ತಿಳಿದು ಈ ಗ್ರಂಥವನ್ನು ಹೊಂಬುಜ ಮಠದ ಪೀಠಾಧಿಕಾರಿಗಳೂ, ಜೈನಧರ್ಮ ಮತ್ತು ಸಮಾಜದ ಅಭ್ಯುದಯಕ್ಕಾಗಿ ರಾತ್ರಿ-ಹಗಲು ದುಡಿಯುತ್ತಿರುವವರೂ. "ಧರ್ಮದಿಂದಾದುದು ಸಿರಿಸುಖ ಎನ್ನುತ್ತ, ಧರ್ಮವ ಮರೆಯುರುತ್ತಮರೂ"...... ಎಂಬ ಶ್ರೀ ರತ್ನಾಕರ ಕವಿಯ ಅಮೃತವಾಣಿಯನ್ನು ತನ್ನ ನಡೆನುಡಿಗಳಲ್ಲಿ ಬೆರಸಿ ಪ್ರಕಾಶಗೊಳಿಸುತ್ತಿರುವವರೂ ಪರಮಪೂಜ್ಯ ಶ್ರೀ ಶ್ರೀ ದೇವೇಂದ್ರಕೀರ್ತಿ ಸ್ವಾಮಿಯವರು ಇದನ್ನು ನೋಡಿದಾಗ ಅವರು ಕೂಡಾ ಮನಮೆಚ್ಚಿ ಈ ಗ್ರಂಥವೇ ಶಾಸ್ತ್ರದಾನಕ್ಕೆ ಸುಯೋಗ್ಯವೆಂದು ನಿರ್ಣಯಮಾಡಿರುವುದನ್ನು ಗ್ರಹಿಸಿದರೆ. "ಸತ್ಯಕ್ಕೆ ಜಯವಿದೆ — ಧರ್ಮಕ್ಕೆ ಬಲವಿದೆ" ಎಂಬುದು ನೂರಕ್ಕೆ ನೂರು ಸತ್ಯವೆಂಬುದು ನಿರ್ಣಯವಾಗುವುದು.

ಈ "ಅಂತರಾತ್ಮ-ದರ್ಶನ" ಎಂಬ ಪುಸ್ತಕವನ್ನು ಶಾಸ್ತ್ರದಾನಕ್ಕಾಗಿ ಉಪಯೋಗಿಸಿರುವ ಪರಮಪೂಜ್ಯ ಶ್ರೀ ಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಸ್ವಾಮಿಜೀಯವರಿಗೆ ಅನಂತಾನಂತ ನಮೋಸ್ತು ನಮೋಸ್ತು. ಮಾತ್ರವಲ್ಲ ಇದಕ್ಕೆ ಮೂಲಕಾರಣರೂ. ಸದ್ಧರ್ಮಪ್ರೇಮಿಗಳೂ ಆಗಿರುವ ಡಾ। ಶ್ರೀ ರವಿಕೀರ್ತಿ ಶೆಟ್ರಿಗೂ ಅನಂತ ಧನ್ಯವಾದಗಳು.

ಜ್ಯೋ। ಯಂ. ಜಗತ್ಪಾಲಯ್ಯ,
ತಮನಂಗಡಿ,
ಮೂಡುಬಿದಿರೆ, (ದ. ಕ.)



ಸ್ವರ್ಗೀಯ ಸ್ವಸ್ತಿ ಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳವರು

# ಸ್ವ. ಸ್ವಸ್ತಿ ಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳವರ ಪರಿಚಯ

ಸಂಸಾರದಲ್ಲಿ ಸರದಿಯ ಸರಮಾಲೆಯಂತೆ ಸತತವೂ ಜೀವಿಗಳು ಒಬ್ಬರ ಹಿಂದೊಬ್ಬರಂತೆ ಯಮಾಲಯಕ್ಕೆ ಪಯಣಿಸುತ್ತಿದ್ದಾರೆ. ಈ ಚಿರಸತ್ಯವನ್ನು ನಿತ್ಯವೂ ನೋಡುತ್ತಿದ್ದರೂ ಉಳಿದವರು ಬದುಕಿನ ಆಸೆ ಬಿಟ್ಟಿಲ್ಲ. ಇದಕ್ಕೂ ಹೆಚ್ಚಿನ ಅಚ್ಚರಿ ಜಗತ್ತಿನಲ್ಲಿ ಮತ್ತೇನಿದೆ? "ಸಂಸರಣಂ ಸಂಸಾರಃ" ಎಂಬಂತೆ ಸದಾ ಸರಿಯುತ್ತಿರುವ ಪರಿವರ್ತನಶೀಲವಾದ ಈ ಪ್ರಪಂಚದಲ್ಲಿ ಯಾವುದೂ ಸ್ಥಿರವಲ್ಲ. ಧರ್ಮ ಒಂದೇ ಸ್ಥಿರ. ವಸ್ತುಸ್ವಭಾವವೇ ಧರ್ಮವಾದುದರಿಂದ ಆ ಧರ್ಮವೇ ನಮ್ಮೆಲ್ಲರ ಧ್ಯೇಯವಾಗಿರಬೇಕು. ಧರ್ಮಾವಲಂಬಿಗಳಿಗೆ ಮರಣದ ಭಯವಿಲ್ಲ. ಮರಣ ಶರೀರಕ್ಕೆ, ಜೀವನಿಗಲ್ಲ. ಮರಣವು ಜೀವನದ ಇನ್ನೊಂದು ಹೆಸರು. ಜೀವನ-ಮರಣಗಳು ಸಂಸಾರದ ಎರಡು ಮುಖಗಳು. ಆದರೆ ಹುಟ್ಟಿದಾಗ ಹುಟ್ಟುಹಬ್ಬವನ್ನಾಚರಿಸಿ, ಸತ್ತಾಗ ಮರಣಶೋಕ ವನ್ನು ವ್ಯಕ್ತಪಡಿಸಿ, ನಮ್ಮ ಮೌಢ್ಯವನ್ನು ನಾವೇ ಘೋಷಿಸುತ್ತೇವೆ. "ಜಾತಸ್ಯ ಮರಣ ಧ್ರುವಂ" ಎಂಬಂತೆ ಹುಟ್ಟಿದವನಿಗೆ ಸಾವು ಕಟ್ಟಿಟ್ಟ ಬುತ್ತಿ ಎಂಬೀ ನಿತ್ಯಸತ್ಯವನ್ನು ಮರೆತು ನಾವು ನಮ್ಮನ್ನು ಅಮರರೆಂದು ಭ್ರಮಿಸುತ್ತೇವೆ. ಇದೇ ಸಂಸಾರಿಗಳಾದ ನಮ್ಮ ದೌರ್ಬಲ್ಯ.

ಆತ್ಮಧರ್ಮವೇ ಆತ್ಮೋತ್ಥಾನಕ್ಕಾಧಾರ! ಇದುವೇ ಆಚಾರ್ಯರ ಆದೇಶ. "ಸತ್ತುಹುಟ್ಟಿದರು – ಹುಟ್ಟಿಸತ್ತರು" ಎಂಬ ನಾಣ್ನುಡಿ ಯೊಂದುಂಟು. ಹುಟ್ಟಿಸತ್ತವರು ಸಂಸಾರದಲ್ಲಿ ಬಲುಮಂದಿ. ಆದರೆ ಸತ್ತುಹುಟ್ಟಿದವರು ಕೆಲವೇ ಮಂದಿ. ಆ ಕೆಲವೇ ಮಂದಿ ಮಹಾನು ಭಾವರಲ್ಲಿ ಪರಮಪೂಜ್ಯ ಸ್ವ. ಸ್ವಸ್ತಿಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳು ಒಬ್ಬರೆಂದರೆ ಅತಿಶಯೋಕ್ತಿಯಲ್ಲ. ತ್ಯಾಗವೇ ಜೀವನವೆಂಬ ತತ್ವವನ್ನು ತನ್ನ ಜೀವನದುದ್ದಕ್ಕೂ ಅಳವಡಿಸಿಕೊಂಡು ಸರಳ ರೀತಿಯಲ್ಲಿ ಜೀವಿಸಿ

ಜೀವನ ಸಾರ್ಥಕ್ಯವನ್ನು ಸಾಧಿಸಿದ ಮಹಾತ್ಯಾಗಿಗಳಿಗೂ ದುರ್ಲಭವೆನಿಸುವಂತಹ ಸಮಾಧಿ ಮರಣದ ಮೂಲಕ ಪರಂಧಾಮವನ್ನೈದಿದ ಆ ಭವ್ಯ ಜೀವನ, ಸೌಭಾಗ್ಯಕ್ಕೆಣೆ ಎಲ್ಲಿ?

ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದಿರೆಯಲ್ಲಿ 1892ನೇ ಇಸ್ವಿಯಲ್ಲಿ ಜನಿಸಿದ ಪೂಜ್ಯಶ್ರೀಯವರ ಪೂರ್ವಾಶ್ರಮದ ಹೆಸರು ನೇಮಿರಾಜ ಶೆಟ್ಟಿ ಎಂದಾಗಿತ್ತು. ಪಂಡಿತರ ಮನೆಯೆಂದೇ ಪ್ರಸಿದ್ಧವಾದ ಮನೆತನದಲ್ಲಿ ಶ್ರೀಯುತ ಅಪ್ಪು ಶೆಟ್ಟಿಯವರ ಧರ್ಮಪತ್ನಿ ಅಂತಮ್ಮನವರ ಗರ್ಭದಲ್ಲಿ ಜನ್ಮತಳೆದರು. ಯೋಗ್ಯ ವಿದ್ವಾಂಸರಿಂದ ವಿದ್ಯಾಭ್ಯಾಸ ಹೊಂದಿ ಸಾಕಷ್ಟು ಸಂಸ್ಕೃತ ಹಾಗೂ ಧಾರ್ಮಿಕ ಜ್ಞಾನವನ್ನು ಪಡೆದರು.

ಆಗಿನ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೂಡುಬಿದಿರೆಯ ಜೈನ ಪಾಠಶಾಲೆ ಸಂಸ್ಕೃತ ಶಿಕ್ಷಣಕ್ಕೆ ಬಹಳ ಪ್ರಸಿದ್ಧಿ ಪಡೆದಿತ್ತು. ಧಾರ್ಮಿಕ ಸಂಸ್ಕೃತ ವಿಭಾಗವನ್ನು ಪ್ರತ್ಯೇಕವಾಗಿ ಕಡ್ಡಾಯವಾಗಿ ನಡೆಸುತ್ತಿದುದು ಆ ಪಾಠಶಾಲೆಯ ಒಂದು ಉನ್ನತ ವೈಶಿಷ್ಟ್ಯವೆನ್ನಬಹುದು. ಸಮಾಜದ ಭಾವೀ ಪೀಳಿಗೆಗಾಗಿ ಧಾರ್ಮಿಕ ಸಂಸ್ಕಾರದಿಂದ ಕೂಡಿದ ಸಂಸ್ಕೃತ ಶಿಕ್ಷಣಕ್ಕೆ ಜಿಲ್ಲೆಯಲ್ಲಿ ಒಂದೇ ಒಂದು ನೆಲೆಯಾಗಿತ್ತು ಈ ಪಾಠಶಾಲೆ.

ಈ ಪಾಠಶಾಲೆಯಲ್ಲಿ ಅನೇಕ ವರ್ಷಗಳ ಕಾಲ ಪಂ। ನೇಮಿರಾಜ ಶೆಟ್ರು ಸೇವೆ ಸಲ್ಲಿಸಿದ್ದರು. ಅವರೊಂದಿಗೆ ಕೆಲವು ವರ್ಷ ಸೇವೆ ಸಲ್ಲಿಸುವ ಸೌಭಾಗ್ಯ ನನಗೂ ಲಭಿಸಿದ್ದು ನನ್ನ ಪುಣ್ಯ. ಶ್ರೀಯುತರ ಪಾಠಪ್ರವಚನದ ವಿಧಾನ ಶ್ರೇಷ್ಠ ಮಟ್ಟದ್ದಾಗಿತ್ತು, ಬೋಧಿಸಿದ ಪಾಠವನ್ನು ಒಪ್ಪಿಸದೆ ಹೊಸ ಪಾಠವನ್ನೇ ಕೊಡುತ್ತಿರಲಿಲ್ಲ. ಸಾಮ, ದಾನ, ಭೇದೋಪಾಯಗಳಿಗೆ ಬಗ್ಗದ ಭಂಡರಿಗೆ ದಂಡಪ್ರಯೋಗವೂ ಇತ್ತು. ಇಂದಿಗೂ ಅವರ ಶಿಷ್ಯಂದಿರನೇಕರು ಅವರ ಅಧ್ಯಾಪನದ ಆದರ್ಶವನ್ನು ಸ್ಮರಿಸಿ ಕೊಂಡಾಡುತ್ತಿದ್ದಾರೆ. ಇಲ್ಲಿ ಆರಂಭಿಕ ಶಿಕ್ಷಣವನ್ನು ಪಡೆದ ಅದೆಷ್ಟೋ ಮಂದಿ ಮಹನೀಯರು ಸಮಾಜದಲ್ಲಿ ಇಂದಿಗೂ ಆದರ್ಶ ಗಣ್ಯವ್ಯಕ್ತಿಗಳೆನಿಸಿ, ಮಹಾ ವಿದ್ವಾಂಸರೆನಿಸಿ, ಸಮಾಜಕ್ಕೂ ಧರ್ಮಕ್ಕೂ ಮಹದುಪಕಾರ ಮಾಡಿದ್ದಾರೆ, ಮಾಡುತ್ತಿದ್ದಾರೆ.

ಮೊದಲಿಂದಲೂ ನಿರಾಡಂಬರವೂ, ಸಹಜ-ಸರಳವೂ ಸ್ನೇಹಶೀಲವೂ ಆಗಿದ್ದ ಅವರ ಜೀವನವು ಎಲ್ಲರೊಂದಿಗೆ ಹಾಲು-ಜೇನಿನಂತೆ ಹಾಸುಹೊಕ್ಕಾಗಿ ಸೇರಿಕೊಂಡಿತ್ತು. ಮೃದು ಹೃದಯದವರಾದ ಇವರ ಮುಖದಿಂದ ಕಠೋರ ನುಡಿಯನ್ನು ಕೇಳಿದುದೇ ಇಲ್ಲವೆಂದರೆ ಅತಿಶಯೋಕ್ತಿಯಲ್ಲ. ಬಾಲ್ಯದಿಂದಲೂ ಧಾರ್ಮಿಕ ಮನೋವೃತ್ತಿಯುಳ್ಳವರಾಗಿದ್ದ ಇವರಿಗೆ ಧಾರ್ಮಿಕ ಜ್ಞಾನದ ಸಂಸ್ಕಾರವು ಅವರ ಮನೆತನದಿಂದಲೇ ಪ್ರಾಪ್ತವಾದ ಪೈತ್ರಿಕ ಸಂಪತ್ತಿಯಾಗಿತ್ತು. ಆದನ್ನು ಮನನಾಧ್ಯಯನಗಳಿಂದ ವಿಸ್ತಾರಗೊಳಿಸಿ ಅವರೊಂದು ವಿಸ್ತೃತ ಶ್ರುತಭಂಡಾರವೇ ಆಗಿದ್ದರೆಂಬುದು ಸತ್ಯ. ಅವರ ಕ್ರಿಯಾಶೀಲತೆಯು ಅಗಾಧಜ್ಞಾನಕ್ಕೆ ಅಲಂಕಾರಪ್ರಾಯವಾಗಿತ್ತು.

ಬಾಲ್ಯದಿಂದಲೂ ವಿರಕ್ತಚಿತ್ತರಾದ ಇವರು, ಗೃಹತ್ಯಾಗ ಮಾಡಿ ಬಾಲಬ್ರಹ್ಮಚಾರಿಗಳಾಗಿ ಶ್ರವಣಬೆಳಗೊಳದ ಹಿಂದಿನ ಭಟ್ಟಾರಕರ ಸನ್ನಿಧಿಯಲ್ಲಿ ಪಾರ್ಶ್ವಕೀರ್ತಿಗಳೆಂಬ ಅಭಿಧಾನದಿಂದ ದೀಕ್ಷೆ ಕೈಗೊಂಡರು. ಮೂಡುಬಿದಿರೆಯ ಹಿಂದಿನ ಭಟ್ಟಾರಕವರ್ಯರು ಪರಂಧಾಮವನ್ನೈದಿದ ಮೇಲೆ ಸುದೀರ್ಘ ಸಮಯದ ವರೆಗೆ ಬರಿದಾಗಿದ್ದ ಭಟ್ಟಾರಕ ಗದ್ದುಗೆಗೆ ಅಭಾವದ ನೋವುಂಟಾಗದಂತೆ ನೋಡಿಕೊಂಡರು. ಸಮಾಜ ಪ್ರಮುಖ ಹಾಗೂ ಸ್ವ. ಪಂ. ನಾಗರಾಜ ಶಾಸ್ತ್ರಿಗಳ ಸಹಕಾರದಿಂದ ಜೈನಕಾಶಿ ದಕ್ಷಿಣದ ಕಾಶಿ ಎಂದು ಪಸಿದ್ಧಿ ಪಡೆದಿರುವ ಮೂಡುಬಿದಿರೆಯ ಮಹಾಕ್ಷೇತ್ರಕ್ಕೆ ಬರುತ್ತಿದ್ದ ಅಪಾರ ಸಂಖ್ಯೆಯ ಯಾತ್ರಿಕರಿಗೆ ಸರ್ವವಿಧದ ಸೌಕರ್ಯಗಳನ್ನೊದಗಿಸುತ್ತಿದ್ದರು. ವಿದ್ಯಾರ್ಜನೆಗಾಗಿ ಬರುತ್ತಿದ್ದ ವಿದ್ಯಾರ್ಥಿಗಳಿಗೆ ಊಟ - ವಸತಿಗಳ ವ್ಯವಸ್ಥೆ ಮಾಡುತ್ತಿದ್ದರು. ಜಿನಮಂದಿರಗಳಲ್ಲಿ ನಡೆಯುವ ನಿತ್ಯ ನೈಮಿತ್ತಿಕ ಪೂಜೆಗಳಿಗೆ ತಕ್ಕ ಸಲಹೆಗಳನ್ನೀಯುತ್ತಾ ಮಠದಲ್ಲೇ ನೆಲೆಸಿದ್ದರು.

ಇಂದಿನ ನೂತನ ಭಟ್ಟಾರಕರಾದ ಪೂಜ್ಯ ಸ್ವಸ್ತಿ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಸ್ವಾಮಿಗಳವರ ಪಟ್ಟಾಭಿಷೇಕ ಮಹೋತ್ಸವ ಕಾಲದಲ್ಲಿ, ಉತ್ಸಾಹದಿಂದ ಭಾಗವಹಿಸಿ, ತುಂಬುಹೃದಯದ ಉದಾರಾಂತಃ

ಕರಣದಿಂದ ಸಹಕಾರವನ್ನೀಡಿದರು. ಇದು ಅವರ ತ್ಯಾಗದ ಪರಮಾವಧಿಯ ನಿದರ್ಶನವಾಗಿದೆ.

ನಿತ್ಯವೂ ಏಕ ಭುಕ್ತಿ, ಪರ್ವತಿಥಿಗಳಲ್ಲಿ ಉಪವಾಸವನ್ನೂ ಮಾಡುತ್ತಿದ್ದರು. ಪ್ರಾತಃ ಸಾಯಂಕಾಲಗಳಲ್ಲಿ, ಸಾಮಯಿಕವನ್ನೂ, ದಶಭಕ್ತಿ ಪಂಚಸ್ತೋತ್ರ ಪಠನವನ್ನೂ ತಪ್ಪದೆ ಮಾಡುತ್ತಿದ್ದರು. ದೇವದರ್ಶನ, ಜಪತಪಾದ್ಯನುಷ್ಠಾನಗಳಲ್ಲಿ ಸದಾ ದತ್ತಚಿತ್ತರಾಗಿದ್ದರು. ಪರ್ವತಿಥಿಗಳಲ್ಲಿ ಮೌನವನ್ನಾಚರಿಸಿ, ರಸಪರಿತ್ಯಾಗ ಮಾಡಿ, ಯಮ ನಿಯಮಾದಿ ವ್ರತಗಳಲ್ಲಿ ಕಲಶಪ್ರಾಯರೆನಿಸಿದ್ದರು.

ಧರ್ಮಾತ್ಮರಾದ ಎಮ್. ಡಿ. ಅಧಿಕಾರಿಗಳ ನಿಧನದಿಂದ ವಾರಂಗ ಮಠವು ವ್ಯವಸ್ಥಾಪಕರಿಲ್ಲದೆ ಬರಿದಾಯಿತು. ಮಠಕ್ಕೆ ಭೂಷಣ ಪ್ರಾಯರಾದ ತ್ಯಾಗಿಗಳಿರಬೇಕಾದುದು ಅಗತ್ಯವೆಂಬುದನ್ನು ಮನಗಂಡು ಹೊಂಬುಜ್ಜ ಮಠದ ಪೂಜ್ಯ ಭಟ್ಟಾರಕರಾಗಿರುವ ಸ್ವಸ್ತಿ ಶ್ರೀ ದೇವೇಂದ್ರ ಕೀರ್ತಿ ಸ್ವಾಮೀಜಿಯವರ ಆಗ್ರಹದ ಆಮಂತ್ರಣದ ಮೇರೆಗೆ ಇತ್ತೀಚೆಗೆ ಅಲ್ಲಿಗೆ ಹೋಗಿ ನೆಲಸಿದ್ದು ಆ ಮಠದ ಆಗುಹೋಗುಗಳ ಕಡೆಗೆ ಗಮನವೀಯುತ್ತಿದ್ದರು. ಮಠದ ವ್ಯವಸ್ಥೆಯಲ್ಲಿ ಪಾಲ್ಗೊಂಡಿದ್ದರು.

"ಕಾಲಾಯ ತಸ್ಮೈ ನಮಃ" ಎಂಬಂತೆ ದಿನೇ ದಿನೇ ದುರ್ಬಲಗೊಳ್ಳುತ್ತಿದ್ದ ಪೂಜ್ಯ ಶ್ರೀಯವರ ಶಾರೀರಿಕ ಸ್ಥಿತಿಯು ಪುನಃ ಚೇತರಿಸಿಕೊಳ್ಳಲು ನಿರಾಕರಿಸಿದಾಗ, ಮರಣವು ಅವಶ್ಯಂಭಾವಿಯೆನಿಸಿದಾಗ, ಇತರರು ಸಂದೇಹಿಸುತ್ತಿರುವಾಗಲೂ, ಕೇಳದೆ ಸ್ವಯಂ ದೃಢ ನಿರ್ಧಾರದಿಂದ ಸಲ್ಲೇಖನಾ ವ್ರತವನ್ನು ಕೈಗೊಂಡರು. ದ್ವಾದಶಾನುಪೇಕ್ಷೆ — ಪಂಚನಮಸ್ಕಾರ ಮಂತ್ರವನ್ನು ಕೇಳುತ್ತಾ ಕೇಳುತ್ತಾ ಶುಭಯೋಗದಿಂದ ತಮ್ಮ 86ನೆಯ ವಯಸ್ಸಿನಲ್ಲಿ ಪರಂಧಾಮವನ್ನೈದಿದರು.

ಸಮಾಧಿ ಮರಣ ಕಾಲದಲ್ಲಿ ಹೊಂಬುಜ್ಜ ಮಠದ ಪೂಜ್ಯ ಶ್ರೀ ಶ್ರೀ ಭಟ್ಟಾರಕರ ಸನ್ನಿಧಿ, ಮೂಡುಬಿದಿರೆಯ ಮತ್ತು ವರಂಗ ನಿವಾಸಿಗಳ ಸೇವೆ ಸ್ತುತ್ಯವಾದುದು. ಬ್ರಹ್ಮಚಾರಿ ಆದಿಸಾಗರ ವರ್ಣೀಜಿ, ಶಾಂತಿರಾಜ ಹೆಗ್ಡೆ ಮತ್ತು ಮೂಡುಬಿದಿರೆಯ ಯಂ. ಪಿ. ರವಿಕೀರ್ತಿ,

ಶ್ರಾವಿಕೆ ನೀಲಮ್ಮ, ಪರಂಗದ ಜೈನ ಬಾಂಧವರು ಉಪಸ್ಥಿತರಿದ್ದು ಅಹರ್ನಿಶಿ ಗುರುಶುಶ್ರೂಷೆಯಲ್ಲಿ ನಿರತರಾಗಿದ್ದರು.

ಮೂಡುಬಿದಿರೆ ಶ್ರೀ ಮಠದ ಪವಿತ್ರ ಧರ್ಮಸಿಂಹಾಸನದ ಪಟ್ಟಾಭಿಷಿಕ್ತರಾಗಿ ಶ್ರೀ ಕ್ಷೇತ್ರದ ಸಂರಕ್ಷಣೆ ಮತ್ತು ಸಾರೋದ್ಧಾ ಧರ್ಮಕಾರ್ಯಗಳ ವ್ಯವಸ್ಥೆಗಾಗಿ ಅಹರ್ನಿಶಿ ದುಡಿದರು.

ಹಿಂದಿನ ಜನ್ಮದ ಸುಕೃತದಿಂದ ಪುಣ್ಯಜೀವಿಯಾಗಿ ಜನಿಸಿ, ನಿ ಜೀವನದಲ್ಲಿ ಪುಣ್ಯವನ್ನಾರ್ಜಿಸಿ, ಸಲ್ಲೇಖನಾ ವಿಧಿಯಿಂದ ಸಮಾ ಯನ್ನೈದಿದ ಆ ಅಮರ ಜೀವವು ನಮಗೆಲ್ಲಾ ಧಾರ್ಮಿಕ ಜೀವನ ಅಮರ ಸಂದೇಶವನ್ನೀಯಲೆಂದು ಮನಸಾ ಹಾರೈಸುವೆ.

ಆಸ್ಥಾನ ವಿದ್ವಾನ್

ಪಂ। ಶಿಶುಪಾಲ ಪಾರ್ಶ್ವನಾಥ ಶಾಸ್ತ್ರಿಗಳು
ಮೂಡುಬಿದಿರೆ

# ಜೈನಧರ್ಮದ ರಹಸ್ಯ

ನಾವು ಈ ಜಗತ್ತಿನಲ್ಲಿ ನಾನಾರೀತಿಯ ಚಿತ್ರವಿಚಿತ್ರಗಳನ್ನು ಕಾಣುತ್ತಿದ್ದೇವೆ. ಈ ವಿಚಿತ್ರಕ್ಕೆಲ್ಲಾ ಕಾರಣ ಕರ್ಮ. "ಕರ್ಮ" ಎಂಬೊಂದು ವಸ್ತು ಇಲ್ಲದಿರುತ್ತಿದ್ದರೆ, ಒಬ್ಬ ರಾಜ, ಒಬ್ಬ ಸೇವಕ, ಒಬ್ಬ ರೋಗಿ, ಇನ್ನೊಬ್ಬ ನಿರೋಗಿ ಹೀಗೆಯೇ ಕಪ್ಪು-ಬಿಳುಪು, ಸಿಹಿ, ಕಹಿ, ಉದ್ದ-ಗಿಡ್ಡ, ಸುರೂಪ-ಕುರೂಪ, ಉಚ್ಚ-ನೀಚ, ಬುದ್ಧಿಶಾಲಿ-ಮೂರ್ಖ, ಕಿವುಡ-ಮೂಕ ಇತ್ಯಾದಿ ವಿವಿಧ ರೀತಿಯ ವಿಚಿತ್ರಗಳಿಗೆ ಕಾರಣವಾದರೂ ಯಾವುದು? ನಮ್ಮ ಕಣ್ಣಿಗೆ ಕಾಣದ ರೀತಿಯ ಯಾವುದೋ ಒಂದು ಕೈವಾಡ ಇರಲೇಬೇಕೆಂಬುದು ನಿರ್ವಿವಾದ. ಇದಕ್ಕೇನೇ ಜೈನ ಧರ್ಮದಲ್ಲಿ "ಕರ್ಮ" ಎಂದು ಹೇಳಿದ್ದಾರೆ.

ಒಂದೇ ತಾಯಿಯ ಗರ್ಭದಲ್ಲಿ ಒಂದೇ ಸಮಯ ಜನಿಸಿದ ಅವಳಿ ಜವಳಿ ಮಕ್ಕಳಲ್ಲಿಯೂ ಓರ್ವನಿಗೆ ಸೂಕ್ಷ್ಮ ಬುದ್ಧಿ, ಮತ್ತೊಬ್ಬನಿಗೆ ಸಾಧಾರಣ ಬುದ್ಧಿ, ಒಬ್ಬ ಬಿಳಿ, ಇನ್ನೊಬ್ಬ ಮಧ್ಯಮ ವರ್ಣ ಇತ್ಯಾದಿ ಇತ್ಯಾದಿ ಹೀಗಾಗಲು ಕಾರಣ ಯಾವುದು? ಈ ಮಕ್ಕಳು ಗರ್ಭದಲ್ಲಿ ಇರುವಾಗ ಯಾವ ವಿಧದ ಕರ್ಮಗಳನ್ನು ಮಾಡದಿದ್ದರೂ ಈ ವ್ಯತ್ಯಾಸ ಹೇಗಾಯಿತು? ವಿಚಾರಿಸಿದರೆ ಏಕಕಾಲದಲ್ಲಿ ಒಂದೇ ಗರ್ಭದಿಂದ ಜನಿಸಿದರೂ ಕೂಡಾ ಆ ಎರಡು ಮಕ್ಕಳ ಆತ್ಮರುಗಳು ಬೇರೆಬೇರೆಯೇ ಆಗಿದ್ದು, ಅವರು ಹಿಂದಿನ ಜನ್ಮದಲ್ಲಿ ಸಂಗ್ರಹಿಸಿರುವ ಶುಭ, ಅಶುಭ ಕರ್ಮಗಳ ಶೇಷದ ಫಲವಾಗಿ ಈ ಜನ್ಮದಲ್ಲಿ ಹೀಗಾಗಲು ಕಾರಣವಾಗಿದೆಯೆಂದು ಸುಲಭವಾಗಿ ತಿಳಿಯಬಹುದು.

"ಆತ್ಮ" ಎಂಬುದು ಅಮರ, ಅಖಂಡ, ನಾಶರಹಿತವಾದುದು. ಒಬ್ಬ ಮನುಷ್ಯನು ಹಳೆಯ ಬಟ್ಟೆಯನ್ನು ಬಿಸಾಡಿ ಹೊಸಬಟ್ಟೆ ಧರಿಸುವಂತೆ, "ಆತ್ಮ" ಕೂಡಾ ಒಂದು ಶರೀರ ಬಿಟ್ಟು ಬೇರೊಂದನ್ನು ಆಕ್ರಮಿಸುತ್ತದೆ. ಜನ್ಮಾಂತರಗಳಿಲ್ಲಿ ಈ ಆತ್ಮನು ಸಂಗ್ರಹಿಸಿರುವ ಶುಭ ಅಶುಭ ಕರ್ಮಾನುಸಾರವಾಗಿ ಈ ಜನ್ಮದಲ್ಲಿ ವಿವಿಧ ರೀತಿಯ ರೂಪ, ಕುಲ,

ಜಾತಿಗಳನ್ನು ಪಡೆದು ಸುಖ-ದುಃಖಾದಿಗಳನ್ನು ಅನುಭವಿಸುತ್ತಾನೆ ಸ್ವರ್ಗವಾಸಿ ದೇವತೆಗಳಿಗೂ ದೊರೆಯಲಾರದ ಮಾನವ ಜನ್ಮವನ್ನು ಪಡೆದಿದ್ದರೂ, ತಾನು ಆರ್ಜಿಸಿದ ದುಷ್ಕರ್ಮಗಳ ನಿಮಿತ್ತವಾಗಿ ಅನೇಕ ರೀತಿಯ ಹಿಂಸೆ-ಸುಳ್ಳು-ಕಳವು-ದುರಾಚಾರ-ಅನೀತಿ-ಅನ್ಯಾಯ-ಅಸೂಯೆಯೇ ಮೊದಲಾದ ಅಕೃತ್ಯ ಮಾಡಿ ಪಾಪಕರ್ಮಗಳ ಸಂಗ್ರಹದ ಮೂಟೆಯನ್ನು ಹೊತ್ತುಕೊಳ್ಳುವನು. ಹಾಲಿನೊಡನೆ ನೀರು ಬೆರೆದಂತೆ ಈ ಕರ್ಮಾಣುಗಳು ಆತ್ಮಪ್ರದೇಶದಲ್ಲಿ ಲೀನ(ಬಂಧ)ವಾಗಿ ಪರಿಣಮಿಸುವುವು. ಈ ಕಾರಣಗಳಿಂದ ಆತ್ಮನು ಅನೇಕ ಜನ್ಮಗಳಲ್ಲಿ ಅತ್ಯಧಿಕವಾದ ದುಃಖವನ್ನು ಅನುಭವಿಸಬೇಕಾಗುತ್ತದೆ.

ಮಾನವತ್ವವನ್ನು ಪಡೆದಿದ್ದರೂ ತಾತ್ಕಾಲಿಕ ಪರಿಸ್ಥಿತಿಯನ್ನು ಯೋಚಿಸುವರೇ ಹೊರತು ಮುಂದೇನಾಗಬಹುದೆಂಬ ಕಡೆಗೆ ಗಮನ ಕೊಡುವುದಿಲ್ಲ. ಕೇವಲ ಸಂಕುಚಿತ ದೃಷ್ಟಿ ಬೀರಿ, ಅತ್ಯಲ್ಪ ಕಾಲದ ಜೀವಿತದಲ್ಲಿ ತಮ್ಮ ಅಂತಸ್ತು, ಗೌರವ, ಪ್ರತಿಷ್ಠೆ ಇವುಗಳ ಕಡೆಗೆ ಹೆಚ್ಚಿನ ಲಕ್ಷ್ಯವಿತ್ತು, ಧರ್ಮ-ಕರ್ಮ-ಆತ್ಮನನ್ನೇ ಮರೆಯುವರು. ಜೀವಿತದ ಕ್ಷಣಿಕ ಸುಖಕ್ಕಾಗಿ ಅಸಂಖ್ಯ ಕಾಲದ ದುಃಖ ಪರಂಪರೆಯ ಮೂಟೆಯನ್ನು ತಲೆಯ ಮೇಲೆ ಹಾಕಿಕೊಳ್ಳುವುದು ಮೂರ್ಖತನವಾಗಿದೆ. ಕೆಲವರು ತಮ್ಮ ಯೋಗ್ಯತೆ ಮೇಲಿನ ಅಹಂಕಾರದಿಂದ ಮದಾಂಧರಾಗಿ ಮನಸ್ಸಿಗೆ ಬಂದಂತೆ ವರ್ತಿಸುತ್ತಾರೆ. ಪ್ರತಿಕ್ಷಣವೂ ತನ್ನ ಸುಖವನ್ನೇ ಬಯಸುವರು.

ಅಸ್ಥಿರವಾದ ಈ ದೇಹವನ್ನು ಒಂದಲ್ಲ ಒಂದು ದಿನ ಬಿಡಲೇಬೇಕು. ಜೀವನು(ಆತ್ಮನು) ಈ ಶರೀರನ್ನು ಬಿಟ್ಟು ಎಲ್ಲಿ ಹೋಗುತ್ತಾನೆ? ಏನಾಗಬಹುದು? ಈ ವಿಚಾರ ಯೋಚಿಸುವುದೇ ಇಲ್ಲ. ತನ್ನ ಪಾಲಿನ ಅರಮನೆ, ಐಶ್ವರ್ಯ, ಅಧಿಕಾರ, ಶಕ್ತಿ ಇವಕ್ಕೆಲ್ಲಾ ಒಂದು ಕಾಲ ಪರಿಮಿತಿ ಉಂಟು. ಹಾಗೂ ಸೇವಿಸಲು ಅಯೋಗ್ಯವಾದ ಮಧ್ಯ, ಮಾಂಸಾದಿಗಳನ್ನು ಸೇವಿಸಿ, ಸಾಕಿರುವ ಈ ದೇಹವು ಆತ್ಮ ತೊಲಗಿದೊಡನೆ ಬೂದಿಯಾಗುವುದು ಅಥವಾ ಮಣ್ಣಿಗೆ ಸೇರಲಿದೆಯೆಂಬುದನ್ನು ಒಂದು ಕ್ಷಣವಾದರೂ ಯೋಚಿಸುವುದಿಲ್ಲ.

ಮನುಷ್ಯನು ತನ್ನ ಗೃಹವು ಚೊಕ್ಕಟವಾಗಿರಲು . ಕಸಬರಿಕೆ (ಹಿಡಿಸೂಡಿ)ಯಿಂದ ಗುಡಿಸುವನು. ಮೈಮೇಲಿನ ಕೊಳೆ ತೆಗೆಯಲು ಸಾಬೂನು ಹಚ್ಚಿ ಸ್ನಾನ ಮಾಡುವನು. ಮಲಿನವಾದ ಬಟ್ಟೆಗಳನ್ನು ಪ್ರತಿದಿನವೂ ಒಗೆಯುವನು, ಮತ್ತು ಶುಭ್ರ ಬಟ್ಟೆ ಧರಿಸುವನು. ಆದರೆ ಅತಿ ಹಿತವಾದ ಆತ್ಮನು ಮಲಿನವಾದರೆ ಅದನ್ನು ಶುದ್ಧಗೊಳಿಸಲು ದಿನದ ಒಂದು ಕ್ಷಣವನ್ನಾದರೂ ಉಪಯೋಗಿಸುವುದಿಲ್ಲ. ಶರೀರ, ಧನ-ಕನಕ-ಜಮೀನು (ಆಸ್ತಿ), ಕಳತ್ರ-ಪುತ್ರ-ಮಿತ್ರ ಇವರೆಲ್ಲ ಕ್ಷಣಿಕ ಮತ್ತು ನಶ್ವರವೆಂದು ತಿಳಿದಿದ್ದರೂ, ಮೋಹನೀಯ ಕರ್ಮದಿಂದ ಹಾಗೂ ಅಜ್ಞಾನದಿಂದ ತನ್ನ ಜೀವನವನ್ನು ಹಾಳು ಮಾಡಿಕೊಂಡು ಅಮರನಾದ ಆತ್ಮನನ್ನು ಪೂರ್ಣ ಮರೆತುಬಿಡುವನು. ಇದಕ್ಕೆಲ್ಲಾ ಉತ್ತರ ಈ "ಆತ್ಮ ದರ್ಶನ"ದಲ್ಲಿದೆ.

ಈ ದೇಹದಲ್ಲಿ "ಆತ್ಮ" ಇರುವ ತನಕ ಮಾತ್ರ ತೋಟ, ಬಂಗಲೆ, ಸಂಪತ್ತು, ಉಪಯೋಗಕಾರಿಯಾದರೆ, ಆತ್ಮನು ಶರೀರದಿಂದ ತೊಲಗಿದೊಡನೆ ಸಂಪತ್ತು-ಬಂಧುಗಳು ಇಲ್ಲಿಯೇ ಉಳಿದು ತಾನು ಮಾಡಿರುವ ಕರ್ಮಗಳ ಫಲ ಅನುಭವಿಸಲು ಬೇರೊಂದು ಶರೀರದಲ್ಲಿ ಆತ್ಮನು ಪ್ರವೇಶ ಮಾಡುವನು. ಮದ್ಯ (ಹೆಂಡ) ಜಡಪದಾರ್ಥವಾದರೂ ಬುದ್ಧಿಯನ್ನು ಮಂಕುಗೊಳಿಸುವಂತೆ ಕರ್ಮವು ಜಡವಾದರೂ ಆತ್ಮನನ್ನು ತನ್ನ ಪ್ರಭಾವಕ್ಕೆ ಒಳಪಡಿಸಿಕೊಂಡು ಶುಭ-ಅಶುಭಕರ್ಮಗಳ ಯೋಗ್ಯತೆಗೆ ಸರಿಯಾದ ಸುಖದುಃಖಗಳನ್ನು ಕೊಡುತ್ತದೆ.

ಅನಾದಿ ಕಾಲದಿಂದ ಗಣಿಯಲ್ಲಿರುವ ಮಣ್ಣಿನೊಡನೆ ಬಂಗಾರ ಸೇರಿರುವಂತೆ, ದೀರ್ಘಕಾಲದಿಂದಲೂ ಈ ಆತ್ಮವು ಕರ್ಮದೊಡನೆ ಸೇರಿರುತ್ತದೆ. ಗಣಿಯಿಂದ ದೊರಕಿದ ಬಂಗಾರದ ಮಿಶ್ರಿತ ಮಣ್ಣನ್ನು ಪ್ರಯೋಗಗಳ ಮೂಲಕ ಶುದ್ಧಗೊಳಿಸಿ ಶುದ್ಧಬಂಗಾರವನ್ನು ಪಡೆಯುವಂತೆ ಧ್ಯಾನ-ತಪಸ್ಸು-ದಯೆ-ಧರ್ಮ-ಸಂಯಮ ಇವೇ ಮೊದಲಾದ ಸಾಧನಗಳಿಂದ ಆತ್ಮನನ್ನು ಶುದ್ಧಗೊಳಿಸಬೇಕಾಗುತ್ತದೆ. ಹಾಗೆಯೇ ಅಂಟಿರುವ ಕರ್ಮಾಣುಗಳನ್ನು ಬೇರ್ಪಡಿಸಿ ಶಾಶ್ವತ ಶಾಂತಿ-ಆನಂದ

ಪಡೆಯಬೇಕಾದರೆ ಸುಜ್ಞಾನಿಗಳು ತೋರಿಸಿರುವ ಸನ್ಮಾರ್ಗದಲ್ಲಿ ನಡೆಯ ಬೇಕು, ಒಳ್ಳೆಯ ಕೆಲಸ ಮಾಡಬೇಕು, ಸರ್ವಪ್ರಾಣಿಗಳಲ್ಲಿಯೂ ಸ್ನೇಹ ಭಾವದಿಂದಿರಬೇಕು. ಅಂದರೆ ಅಹಿಂಸಾ ನೀತಿಯನ್ನು ಪರಿಪಾಲಿಸಿ ಸದ್ವರ್ತನೆ, ಸದಾಚಾರ, ಮತ್ತು ನ್ಯಾಯಮಾರ್ಗ ಅನುಸರಿಸಬೇಕು. ಇಂದ್ರಿಯಗಳ ದಾಸನಾಗುವುದರ ಬದಲು ಅವುಗಳನ್ನು ಹತೋಟಿ (ಸಂಯಮ)ಯಲ್ಲಿರಿಸಬೇಕು. ಧರ್ಮ, ಅಧರ್ಮಗಳ ತತ್ತ್ವ ನೀತಿ ಯನ್ನು ಅರಿತು ಆತ್ಮವಿಕಾಸಕ್ಕೆ ಪ್ರಯತ್ನಿಸಬೇಕು.

ಜೀವಾತ್ಮರುಗಳ ಸಂಖ್ಯೆಯು ಅನಂತಾನಂತವಾಗಿರುವುದು. ಯಾವ ಆತ್ಮವು ಕರ್ಮಗಳಿಂದ ಬಿಡುಗಡೆ (ಮುಕ್ತಿ) ಹೊಂದುವವೋ ಆ ಆತ್ಮವು "ಪರಮಾತ್ಮ" ಎಂದಾಗುವುದು. ಪರಿಶುದ್ಧವಾದ ಆತ್ಮಕ್ಕೆ ಕರ್ಮದ ಲೇಪವಿಲ್ಲ. ಮತ್ತು ಅದಕ್ಕೆ ಪುನರ್ಜನ್ಮವೂ ಇಲ್ಲ. ಅಂದರೆ ಪುನರಾವತಾರವಿಲ್ಲ. ಬೀಜವು ಉದುರಿಹೋದ ಮೇಲೆ ಸಸಿ ಆಗಲು ಹೇಗೆ ಸಾಧ್ಯವಿಲ್ಲವೋ ಅದೇ ರೀತಿ ಕರ್ಮರೂಪೀ ಬೀಜವು ಭಸ್ಮೀ ಭೂತವಾದರೆ ಜನನ ಮರಣಗಳೆಂಬ ಸಸಿಯುಂಟಾಗಲು ಕಾರಣವೇ ಇಲ್ಲ. ಇದಕ್ಕೆ ಪ್ರಬಲವಾದ ಸಾಧನ ಯಾವುದೆಂದರೆ "ಆತ್ಮದರ್ಶನ"... ಇದೇ ಹೆದ್ದಾರಿ...

## ಜೀವನದ ಸೂತ್ರ

ಜೀವನದಲ್ಲಿ ಮೂರು ತತ್ತ್ವಗಳು ಅಡಗಿರುವುದು. (1) ಆತ್ಮದ ಅಮರತೆ, ಮತ್ತು ಅಖಂಡತೆ (2) ದೇಹದ ಕ್ಷುದ್ರತೆ (3) ಸ್ವಧರ್ಮದ ಅಬಾಧಿತತೆ. ಈ ಮೂರರಲ್ಲಿ ಸ್ವಧರ್ಮದ ಸಿದ್ಧಾಂತ ತತ್ತ್ವವು ಕರ್ತವ್ಯ ರೂಪವಾಗಿದೆ...

ಸ್ವಧರ್ಮವು ನಿಸರ್ಗಪ್ರಾಪ್ತಿಯಾಗಿರುವುದು. ಯಾಕೆಂದರೆ ನಾವು ಆಕಾಶದಿಂದ ಕೆಳಗೆ ಬಿದ್ದವರಲ್ಲ. ಭೂಮಿಯಿಂದ ಒಡೆದು ಬಂದವರೂ ಅಲ್ಲ. ನಾವು ಜನನಕ್ಕೆ ಬರುವ ಮೊದಲೇ ಈ ಸಮಾಜವಿತ್ತು; ತಂದೆ

ತಾಯಿ ಇದ್ದರು; ನೆರೆಹೊರೆಯವರೂ ಇದ್ದರು. ನಾವು ಹುಟ್ಟುವ ಮೊದಲೇ ನಮ್ಮ ಸ್ವಧರ್ಮ ರೂಪುಗೊಂಡು ಸಿದ್ಧವಾಗಿರುತ್ತದೆ. ಏಕೆಂದರೆ ನಮ್ಮ ಹುಟ್ಟಿಗೆ ಅದೇ ಕಾರಣ. ಅದನ್ನು ಪೂರ್ಣ ಮಾಡುವುದು ನಮ್ಮ ಕರ್ತವ್ಯವಾಗಿದೆ. "ಸ್ವಧರ್ಮ" ಅಂದರೆ ತಾಯಿಯಂತೆ ಹೋಲಿಸಬಹುದು; ಕಾರಣ? ಈ ಜನ್ಮದಲ್ಲಿ ಇಂಥಾ ತಾಯಿಯೇ ಬೇಕು ಎಂದು ಆರಿಸಲು ಸಾಧ್ಯವಿಲ್ಲ. ಅದೆಲ್ಲಾ ಮೊದಲೇ ಏರ್ಪಾಡಾಗಿದೆ. ಸ್ವಧರ್ಮ ವಿನಹ ಬೇರೆ ಯಾವ ಆಶ್ರಯವೂ ಲೋಕದಲ್ಲಿ ನಮಗಿಲ್ಲ. ಸ್ವಧರ್ಮವನ್ನು ಬಿಡುವುದೆಂದರೆ ಆತ್ಮಘಾತಕತನವಾದೀತು. ಆದುದರಿಂದ ನಾವು ಅದನ್ನು ಯಾವತ್ತೂ ಬಿಡಬಾರದು. ಇದು ಜೀವನದ ಒಂದು ಸೂತ್ರ...

ಇಂಥಾ ಪ್ರಸಂಗದಲ್ಲಿ ಸ್ವಧರ್ಮನಿಷ್ಠೆಯೊಂದೇ ಸಾಲದು. ಇದಕ್ಕಾಗಿ ಉಳಿದ ಎರಡೂ ಸೂತ್ರಗಳನ್ನೂ ಲಕ್ಷ್ಯದಲ್ಲಿಡಬೇಕು. ನನ್ನದು ಸಾವಿನಿಂದ ಉಳಿಯುವ ದೇಹವಲ್ಲ. ಈ ದೇಹ ಕೇವಲ ಮೇಲಿನ ಹೊದಿಕೆಯಾಗಿರುತ್ತದೆ; ಎಂಬುದು ಒಂದು ಸೂತ್ರ. ಹಾಗೆಯೇ ಈ ಆತ್ಮನು ಎಂದಿಗೂ ಸಾಯದ ಮರಣಗೊಳ್ಳದ, ಅಖಂಡ ವ್ಯಾಪಕನಾಗಿರುವವನು ಎಂಬುದು ಎರಡನೆಯ ಸಿದ್ಧಾಂತ. ಇವೆರಡು ಸೇರಿ ಒಂದು "ಪೂರ್ಣತತ್ವಜ್ಞಾನ"...

ಆತ್ಮ ತತ್ವದ ಅಖಂಡತೆ, ದೇಹದ ಕ್ಷುದ್ರತೆಗಳನ್ನು ತಿಳಿಯುವುದೇನೂ ಕಷ್ಟವಲ್ಲ. ಏಕೆಂದರೆ ಇವು ಎರಡೂ ಸತ್ಯ. ಆದರೆ ಆ ಬಗ್ಗೆ ವಿಚಾರ ಮಾಡಬೇಕು. ಪದೇ ಪದೇ ಈ ವಿಚಾರವನ್ನು ಮನಸ್ಸಿನಲ್ಲಿ ಚಿಂತಿಸುತ್ತಿರಬೇಕು. ದೇಹದ ಮಹತ್ವವನ್ನು ತಗ್ಗಿಸಿ, ಆತ್ಮದ ಮಹತ್ವವನ್ನು ಹೆಚ್ಚಿಸುವ ಕಲೆಯನ್ನು ನಾವು ಕಲಿಯಬೇಕು...

ಈ ದೇಹವು ದಿನದಿಂದ ದಿನಕ್ಕೆ, ಕ್ಷಣದಿಂದ ಕ್ಷಣಕ್ಕೆ ಬದಲಾಗುತ್ತಲೇ ಇದೆ. ಬಾಲ್ಯ-ತಾರುಣ್ಯ-ವಾರ್ಧಕ್ಯ, ಈ ಬದಲಾವಣೆಗಳ ದೃಶ್ಯ ಪ್ರತಿಯೊಬ್ಬರಿಗೂ ಅನುಭವವುಂಟು. ಕೆಲವು ಆಧುನಿಕ ಶಾಸ್ತ್ರಜ್ಞರು ಏಳು ವರ್ಷಕ್ಕೊಮ್ಮೆ ಶರೀರ ಬದಲಾಗುತ್ತದೆ. ಹಳೆಯ ರಕ್ತ ಒಂದು

ತೊಟ್ಟು ಕೂಡಾ ಇರಲಾರದು; ಎಂದು ಕಂಡುಹಿಡಿದಿರುವರು. ಹೀಗೆಯೇ ಪ್ರತಿ ಕ್ಷಣಕ್ಕೂ ಬದಲಾಗುತ್ತಾ, ಪ್ರತಿಯೊಂದು ಸಮಯ ಬದಲಾಗುತ್ತಿರುವ, ಮತ್ತು ಸದಾಕಾಲ ಮಲಮೂತ್ರಗಳ ಚರಂಡಿಯೇ ಹರಿಯುತ್ತಿದ್ದು, ಎಷ್ಟು ತೊಳೆದರೂ ನಿರ್ಮಲವಾಗದ ದೇಹವು ನಿರ್ಮಲವೆ ಶಾಶ್ವತವೆ?...

ದೇಹವು ರೋಗಮಯವಾದರೆ "ಆತ್ಮನು" ಅದಕ್ಕೆ ಔಷದೋಪಚಾರ ಮಾಡುವವನು. ದೇಹವು ಸಾಯುವ ವಸ್ತು, ಆದರೆ ಆತ್ಮನು ಚಿರಂಜೀವಿ. ಹೀಗಿರುವಾಗ ದೇಹಕ್ಕೂ ಆತ್ಮನಿಗೂ ಸಂಬಂಧವೇನು? ದೇಹ ನಾಶವಾದರೆ ದುಃಖಿಸುವುದು ಏಕೆ?

ದೇಹ ಒಂದು ಬಟ್ಟೆಯ ಹಾಗಿದೆ. ಹಳೆಯದು ಹರಿದರೆ ಹೊಸ ಬಟ್ಟೆ ತೆಗೆದುಕೊಳ್ಳುತ್ತೇವೆ. ಆತ್ಮ ಅವಿನಾಶಿ, ಆತ್ಮ ಅಖಂಡವಾಗಿ ಹರಿಯುತ್ತಿರುವ ಹೊಳೆ, ಈ ಹೊಳೆಯಲ್ಲಿ ಎಷ್ಟೋ ವಿಧದ ದೇಹಗಳು ತೇಲಿಕೊಂಡು ಬರುತ್ತವೆ, ಹೋಗುತ್ತವೆ. ಈ ವಿಚಾರವನ್ನು ಸದಾ ವಿಚಾರಿಸುತ್ತಿರಬೇಕು...

ದೇಹದ ಆಸಕ್ತಿಯೇ ಪ್ರೇಮವಲ್ಲ. ದೇಹದ ಮಮಕಾರ ಹೋಗದೆ ನಿಜವಾದ ಪ್ರೇಮ ಮೂಡುವುದಿಲ್ಲ. ಈಗ ದೇಹದ ಪೂಜೆಯೇ ನಮ್ಮ ಗುರಿಯಾಗಿದೆ. ಸ್ವಧರ್ಮಪಾಲನೆ ನಮ್ಮ ಗುರಿ ಎಂದು ಮರೆತಿದ್ದೇವೆ. ಸ್ವಧರ್ಮಾಚರಣೆಗಾಗಿ ಮಾತ್ರ ದೇಹವನ್ನು ಕಾಪಾಡಬೇಕು. ಅದಕ್ಕೆ ತಿನ್ನಲೂ ಕುಡಿಯಲೂ ಕೊಡಬೇಕು. ಆದರೆ ನಾಲಗೆಯ ಚಪಲತೆಯನ್ನು ತೀರಿಸಬೇಕಾಗಿಲ್ಲ. ಒಡಿಸುವ ಸೌಟಿಗೆ ಶ್ರೀಖಂಡವಾದರೇನು? ಚಟ್ನಿಯಾದರೇನು? ಎರಡೂ ಒಂದೇ. ನಾಲಿಗೆಗೂ ಹಾಗೆ ಬೇಕು. ನಾಲಿಗೆಗೆ ರಸಜ್ಞಾನ ಮಾತ್ರ ಇರಲಿ. ಅದರ ಸುಖದುಃಖ ಬೇಡ. ಶರೀರಕ್ಕೆ ಅದರ ಬಾಡಿಗೆಯನ್ನು ಕೊಟ್ಟರೆ ಸಾಕು.

ದೇಹವನ್ನು ಉಪಕರಣವೆಂದು ಬಳಸದೆ, ನಾವು ಮೈಯನ್ನು ದೊಡ್ಡದೆಂದು ತಿಳಿದು ಅದರ ಪೋಷಣೆಯಲ್ಲಿಯೇ ಮುಳುಗಿ, ಆತ್ಮನನ್ನು ಕುಗ್ಗಿಸುತ್ತೇವೆ. ಅದರಿಂದ ಮೊದಲೇ ಕ್ಷುದ್ರವಾದ ಮೈ (ಶರೀರ) ಮತ್ತಷ್ಟು ಕ್ಷುದ್ರವಾಗುತ್ತದೆ...

ನಮ್ಮ ಆತ್ಮ ವ್ಯಾಪಕವಾಗಲು ಸದಾ ಚಡಪಡಿಸುತ್ತಿರುತ್ತದೆ. ಅದಕ್ಕೆ ಇಡೀ ಜಗತ್ತನ್ನೇ ಹಬ್ಬಿಕೊಳ್ಳಬೇಕೆಂಬ ಬಯಕೆ ಇರುತ್ತದೆ. ಆದರೆ ನಾವು ಅದನ್ನು ಕಟ್ಟಿಹಾಕಿರುತ್ತೇವೆ; ಸೆರೆಹಾಕಿದ್ದೇವೆ. ನಮಗೆ ಆತ್ಮನ ನೆನಪೇ ಆಗಲಾರದು. ಮುಂಜಾನೆಯಿಂದ ಸಂಜೆಯ ತನಕ ದೇಹದ ಸೇವೆಯೇ ನಮ್ಮ ಗುರಿ. ಈ ಶರೀರ ಎಷ್ಟು ಬಲಿಯಿತು, ಎಷ್ಟು ಸೊರಗಿತು, ಎಂಬುದೇ ನಮ್ಮ ಚಿಂತೆ. ಭೋಗದ ಆನಂದ, ರುಚಿಯ ಆನಂದ ಪಶುವಿಗೂ ಉಂಟು. ಆದರೆ ತ್ಯಾಗದಾನಂದವನ್ನೂ, ರುಚಿಯ ನಿಸ್ಪೃಹದಾನಂದವನ್ನೂ ತಿಳಿಯಬೇಡವೆ?

ಅಧರ್ಮ - ಪರಧರ್ಮಗಳು ಅಡ್ಡದಾರಿ. ಇದನ್ನು ಬಿಟ್ಟು ಸ್ವಧರ್ಮದಲ್ಲಿ ಸರಳ ಮಾರ್ಗವನ್ನು ಹಿಡಿಯಬೇಕು. ದೇಹವು ಕ್ಷಣ ಭಂಗುರ, ಇದನ್ನು ತಿಳಿದು ಸ್ವಧರ್ಮಕ್ಕಾಗಿ ದೇಹವನ್ನು ಉಪಯೋಗಿಸಬೇಕು. "ಆತ್ಮ" ಅಖಂಡ-ವ್ಯಾಪಕ. ಇದನ್ನು ತಿಳಿದು ಸದಾ ಜಾಗೃತನಾಗಿ, ಮನಸ್ಸಿನಿಂದ ಸ್ವ-ಪರಭೇದಗಳನ್ನು ಕಿತ್ತೊಗೆಯಬೇಕು. ಈ ರೀತಿ ತಿಳಿದು ಆಚರಿಸುವ ಮನುಷ್ಯನು ಒಂದಿಲ್ಲೊಂದು ದಿನ ಸಚ್ಚಿದಾನಂದ ಸ್ವರೂಪನಾದಾನು, ಆಗಿಯೇ ಆಗುತ್ತಾನೆ.

## ಆತ್ಮ

ಆಧುನಿಕವಾದ ಈ ವಿಜ್ಞಾನಯುಗದಲ್ಲಿ ಅನೇಕ ವ್ಯಕ್ತಿಗಳು ಸದ್ಧರ್ಮದ ಆರಾಧನೆ, ಮತ್ತು "ಪರಮಾತ್ಮ" ಭಕ್ತಿಸೇವೆ, ಉಪಾಸನೆಗಳಿಂದ ಹಿಂದೆ ಬಿದ್ದಿರುವರು. ಇದಕ್ಕೆ ಮುಖ್ಯ ಕಾರಣವೇನೆಂದರೆ, ಅವರು ಆತ್ಮನನ್ನು ಒಪ್ಪುವುದಿಲ್ಲ. ಒಂದು ಸಲ ಆತ್ಮದ ವಿಚಾರದಲ್ಲಿ ಸಂದೇಹವುಂಟಾದರೆ, ಉಳಿದ ಪಾಪ, ಪುಣ್ಯ, ಪರಲೋಕಗಳನ್ನು ನಂಬುವುದಾದರೂ ಹೇಗೆ? ಇತರ ವಸ್ತುಗಳು ಯಾವ ರೀತಿ ನಮ್ಮ ಕಣ್ಣಿಗೆ ಗೋಚರವಾಗುತ್ತವೋ ಅದೇ ರೀತಿ ಕಣ್ಣಿಗೆ ಕಾಣದ ಆತ್ಮನನ್ನು ಹೇಗೆ ನಂಬಲಿ? ಎಂದು ಈ ಅನಾತ್ಮವಾದಿಗಳ ತರ್ಕವಾಗಿದೆ.

ಇದಕ್ಕೆ ನಮ್ಮ ಸುಜ್ಞಾನಿಗಳ ಸಮಾಧಾನವೇನೆಂದರೆ-"ಆತ್ಮ" ಎಂಬಾಯರ್
ಒಂದು ವಸ್ತು ಇರುವುದೆಂದು ಹೇಳಿದವರು "ಸರ್ವಜ್ಞರು", ಅದೊಂದು
ಸ್ವಯಂಸಿದ್ಧವಸ್ತು. ಅದು ರೂಪರಹಿತವಾದುದರಿಂದ ನಮ್ಮ ದೃಷ್ಟಿನಿಮಿಶ
ಗೋಚರವಾಗಲಾರದು. ವಾಗುತ್ತ

ಗಾಳಿಯನ್ನು ನಾವು ಎಲ್ಲಿ ಕಾಣುತ್ತೇವೆ? ಯಾರಾದರೂ ಗಾ
ಯೆಂಬ ವಸ್ತು ಇದೆಯೋ ಇಲ್ಲವೋ? ಎಂದು ಕೇಳಿದರೆ "ಇದೆ" ಎಂಬುವನೆಯಿ
ಉತ್ತರ ಕೊಡುವುದಿಲ್ಲವೆ? ಇದಕ್ಕೆ ಕಾರಣ? ವೃಕ್ಷಸಮೂಹದ ಎಲೆ ಅಥವಾ
ಗಳು ಅಲ್ಲಾಡುತ್ತಿರುವುದು ನಾವು ನೋಡುತ್ತೇವೆ. ಇದೇ ರೀತಿ ನಮವಾಸವ
ಅಜ್ಜ-ಮುತ್ತಜ್ಜರನ್ನು ನಾವು ಕಾಣದಿದ್ದರೂ, ಇದ್ದರೆಂದು ಹೇಳುತ್ತೇವೆ ಗೃಹಕ
ಅದೂ ಅಲ್ಲದೆ ನಮ್ಮ ಪೂರ್ವಿಕರಾದ ಸಹಸ್ರಾರು ಬಂಧುಗಳೂ ಈಮುಗಿ
ನಮಗೆ ಕಾಣುತ್ತಾರೆಯೆ? ಅವರು ಇದ್ದರು ಎಂಬ ಯಾವ ಚಿಹ್ನೆಯುಮತೋ
ನಮಗೆ ಪ್ರತ್ಯಕ್ಷ ಕಂಡುಬಾರದಿದ್ದರೂ, ಇದ್ದರೆಂದೇ ನಾವು ನಂಬು ಶರೀರ
ದಿಲ್ಲವೇ? ನಾವು ಈಗ ಜೀವಂತರಾಗಿರುವುದರಿಂದ ನಮ್ಮ ಪೂರ್ವಿಕರು ಬೇರೆ
ಇದ್ದರೆಂದು ನಂಬಲು ಆಧಾರವಾಗಿರುತ್ತದೆ. ಹಾಗೆಯೇ ವೃಕ್ಷದ ಮೂದಿಂದ
ವನ್ನು ನಾವೆಲ್ಲಿ ಕಾಣುತ್ತೇವೆ? ಮೂಲ ಇದೆಯೋ ಇಲ್ಲವೋ? ಎಂದು ಪ್ರಾಕ್
ಪ್ರಶ್ನಿಸಿದರೆ, ಇದೆಯೆಂದೇ ನಾವು ಹೇಳುತ್ತೇವೆ. ಇದೇ ರೀತಿ ಕಾರ
ದಿಂದ ಕಾರ್ಯವನ್ನು ತಿಳಿಯುತ್ತೇವೆ. ಹೀಗೆಯೇ ಆತ್ಮದ ಕಾರ್ಯ
ಜೀವಿತನಾಗಿರುವ ಮನುಷ್ಯನಲ್ಲಿ ನಮ್ಮ ದೃಷ್ಟಿಗೆ ಗೋಚರವಾಗುತ್ತದೆ.

ಜೀವಿಸಿರುವ ಮನುಷ್ಯನು ಚಲಿಸುವುದು-ನಡೆಯುವುದು-ಕ್ರೀ
ಸುವುದು-ಕೆಲಸ ಮಾಡುವುದು-ಭೂತ-ಭವಿಷ್ಯತ್ಕಾಲದ ಘಟನೆಗಳನ್ನು
ಆಲೋಚಿಸುವುದು-ವಿವಿಧ ವಿಷಯಗಳನ್ನು ತಿಳಿಯುವುದು, ಇವೇ
ಮೃತನಾದ ಮಾನವನಿಂದ ಸಾಧ್ಯವಿಲ್ಲ.

ಮೃತನಾಗುವುದಕ್ಕೆ ಒಂದು ನಿಮಿಷ ಮೊದಲು ಆ ವ್ಯಕ್ತಿಯು
ಚಲಿಸುವುದು, ಆಡುವುದು, ನಮಗೆ ಗೋಚರವಾಗುತ್ತವೆ. ನಂತರ
ಮೃತನಾದ ಕೂಡಲೇ ಆ ವ್ಯಕ್ತಿಯು ಏನೊಂದು ಚೇಷ್ಟೆಗಳೂ ಕಂಡು
ಬರುವುದಿಲ್ಲವಲ್ಲ? ಕಾರಣವೇನೆಂದರೆ, ಜೀವಿತ ಮನುಷ್ಯನಲ್ಲಿ ಆತ್ಮ

ಕಾರ್ಯವಿದೆ; ಎಂದೂ, ಆ ಮೃತ ಶರೀರದಿಂದ ಆತ್ಮನು ಹೊರಬಿದ್ದಿದೆ ಆದುದೆಂದೂ, ಪ್ರತ್ಯಕ್ಷ ಉದಾಹರಣೆಯಿಂದ ನಮಗೆ ತಿಳಿಯುತ್ತದೆ. ಈ ದೃಷ್ಟಿವಿಮರ್ಶೆಯಿಂದ "ಆತ್ಮ" ಎಂಬ ಒಂದು ವಸ್ತು ಇದೆಯೆಂದು ನಿರ್ಣಯ ವಾಗುತ್ತದೆ...

ಈ ಶರೀರವು ಆತ್ಮದ ಗೃಹ (ಮನೆ). ಮನೆಯಲ್ಲಿ ವಾಸಿಸುವವರು ಮನೆಯಿಂದ ಪ್ರತ್ಯೇಕವಾಗಿಯೇ ಇರುವವರು. ಆ ಮನೆ ಬಿದ್ದುಹೋದರೆ ಅಥವಾ ಬಾಡಿಗೆಯ ಕರಾರಿನ ಅವಧಿಯು ತೀರಿದರೆ, ಆ ಮನೆಯಲ್ಲಿ ವಾಸಮಾಡುತ್ತಿದ್ದವರು, ಆ ಮನೆಯನ್ನು ಖಾಲಿಮಾಡಿ, ಮತ್ತೊಂದು ಗೃಹಕ್ಕೆ ಹೋಗುತ್ತಾರೆ. ಇದೇ ರೀತಿ ಶರೀರದಲ್ಲಿ ಆತ್ಮನಿರುವ ಅವಧಿ ಮುಗಿದ ತಕ್ಷಣ ಆ ಆತ್ಮನು ಸಂಗ್ರಹ ಮಾಡಿಟ್ಟ ಕರ್ಮಾನುಸಾರ ಮತ್ತೊಂದು ಸ್ಥಳಕ್ಕೆ ತೆರಳುತ್ತದೆ. ಎರಡನೆ ಜನ್ಮದಲ್ಲಿ ಹೊಸತಾದ ಶರೀರವನ್ನು ಪ್ರವೇಶಿಸುತ್ತದೆ. ಅಲ್ಲಿಯ ಅವಧಿ ತೀರಿದೊಡನೆ ಬೇರೊಂದು – ಆ ಮೇಲೆ ಮತ್ತೊಂದು – ಹೀಗೆಯೇ ಅನಾದಿ ಕಾಲ ದಿಂದ ಕರ್ಮಾನುಸಾರವಾಗಿ ಈ ಆತ್ಮನಿಗೆ ಜನನ ಮರಣಗಳು ಪ್ರಾಪ್ತವಾಗುತ್ತವೆ...

ಕತ್ತಿಯು ಕವಚದಿಂದ ಹೇಗೆ ಪ್ರತ್ಯೇಕವಾಗಿದೆಯೋ ಅದೇ ರೀತಿ ಶರೀರದಿಂದ ಆತ್ಮನು ಅಂಟದೆ ಬೇರೆಯೇ ಇರುತ್ತಾನೆ. ಬೆಣ್ಣೆ-ತುಪ್ಪವು ಹಾಲಿನಲ್ಲಿದ್ದರೂ ನಮಗೆ ಗೋಚರಿಸುವುದಿಲ್ಲ. ಆದರೆ ವಿವೇಕಿಗಳ ಪ್ರಯೋಗದಿಂದ ಉತ್ಪನ್ನವಾದ ಬೆಣ್ಣೆ-ತುಪ್ಪ ನಮಗೆ ಗೋಚರ ವಾಗುತ್ತದೆ. ಇದೇ ರೀತಿ ಆತ್ಮನನ್ನು ಕೇವಲ (ಮಹಾ) ಜ್ಞಾನದಿಂದ ಮಾತ್ರ ಕಾಣಬಹುದು. ಜ್ಞಾನವೆಂಬ ಕಾರ್ಯ ಆತ್ಮನಿಂದ ಮಾತ್ರ ಸಾಧ್ಯ. ಅಂದರೆ ಜಡವಸ್ತುವಿನಿಂದ ಸಾಧ್ಯವಿಲ್ಲ. ಯಾಕೆಂದರೆ ಜಡ (ಪುದ್ಗಲ)ದಲ್ಲಿ ಆ ಜ್ಞಾನದ ಲವಲೇಶವೂ ಇಲ್ಲ. ಶರೀರವೆಂಬುದು ಒಂದು ಭೋಗವಸ್ತು. ಅದನ್ನು ಅನುಭವಿಸಲು ಯಾರಾದರೊಬ್ಬರ ಆಗತ್ಯವಿದೆ. ಅದೇ "ಆತ್ಮ - ಅನುಭವಿಸುವ ಆತ್ಮನು ಭೋಗವಸ್ತು ವಿನಿಂದ ಬೇರೆಯೇ ಆಗಿರುವುದು...

ನಾನು ಯಾರು? ಈ ಪ್ರಶ್ನೆ ಕೂಡಾ "ಆತ್ಮ" ಎಂಬ ವಸ್ತು ಎಂದು ಸ್ಥಿರಪಡಿಸಲು ಕಾರಣವಾಗಿದೆ. ಇದು ನನ್ನ ಕೈ, ಇದು ನ ಕಾಲು, ಇದು ನನ್ನ ಬಟ್ಟೆ, ನನ್ನ ಮನೆ, ನನ್ನ ಭೂಮಿ, ಎಂದು ಹೇ ವವನು ಯಾರು? ಜಡ ಪುದ್ಗಲ) ವಸ್ತುಗಳಿಗೆ ಈ ಪ್ರಶ್ನೆಯ ಹುಟ್ಟುವುದಿಲ್ಲ. ಶರೀರದಲ್ಲಿ ಆತ್ಮ ಇದ್ದರೆ ಮಾತ್ರ, ನಾನಿದ್ದೇನೆ, ನಾ ಸುಖವಾಗಿದ್ದೇನೆ, ಅಥವಾ ನಾನು ದುಃಖಿ ಎಂದು ಹೇಳಲು ಸಾಧ್ಯವಿ ಏಕೆಂದರೆ ಜ್ಞಾನ ಮತ್ತು ಸುಖಾದಿ ಗುಣಗಳು ಇರುವುದು ಆತ್ಮನಿ ಮಾತ್ರ. ಈ ಗುಣ ಜಡವಸ್ತುವಿಗಿಲ್ಲ. ಈ ಶರೀರದಿಂದ ಆತ್ಮನು ಹೋ ಬಿದ್ದರೆ, ಮೃತ ಶರೀರಕ್ಕೆ ನಾನಿದ್ದೇನೆ, ಎಂಬ ಜ್ಞಾನವು ಇರುವುದಿಲ್ಲ ಇದರಿಂದಾಗಿ ಶರೀರವೇ ಬೇರೆ, ಆತ್ಮನೇ ಬೇರೆ ಎಂದು ಸ್ಥಿರವಾಗುತ್ತದೆ.

ಕಿಟಿಕಿಯ ಬಳಿ ನಿಂತು ನೋಡುತ್ತಿರುವವನು ಕಿಟಿಕಿಯಿಂದ ಹೇ ಪ್ರತ್ಯೇಕವೇ ಇರುವನೋ ಅದೇ ರೀತಿ ಆತ್ಮನು ಶರೀರದೊಳಗೆ ಇದ್ದ ಎಲ್ಲವನ್ನೂ ನೋಡುತ್ತಾನೆ. ಮತ್ತು ತಿಳಿಯುತ್ತಾನೆ. ಕಣ್ಣು ನೋಡ ತ್ತದೆ. ಆದರೆ ಕಣ್ಣು ನೋಡುವುದಿಲ್ಲ; ಆ ಕಣ್ಣಿನ ಮೂಲಕ ಪ್ರ ಯೊಂದನ್ನೂ ನೋಡುವುದು ಆತ್ಮ...

ಮೃತ ಶರೀರದಲ್ಲಿಯೂ ಆ ನೋಡುತ್ತಿರುವ ಕಣ್ಣುಗಳಿ ಯಲ್ಲವೇ? ಆತ್ಮನು ಹೊರಬಿದ್ದಿರುವ ಆ ಮೃತಶರೀರದಲ್ಲಿ ರುವ ಕಣ್ಣು ಗಳು ಏಕೆ ನೋಡಲಾರವು? ಈ ಉದಾಹರಣೆಗಳಿಂದ ತಿಳಿಯು ದೇನೆಂದರೆ, ಕಣ್ಣು ನೋಡುವುದಿಲ್ಲ, ಜೀವಿತ ವ್ಯಕ್ತಿಯಲ್ಲಿ ಆತ್ಮವಿತ್ತು ಅದು ನೋಡುತ್ತಾ ಇತ್ತು. ಕಣ್ಣು ಎಂಬುದು ಒಂದು ಸಾಧನ ಮಾತ್ರ... ವ್ಯಕ್ತಿಯು ಕಿಟಕಿ ಬಾಗಿಲಿನ ಮೂಲಕ ಹೇಗೆ ಹೊರಗಿರುವ ವಸ್ತು ಗಳನ್ನು ಕಾಣುತ್ತಾನೋ ಅದೇ ರೀತಿ ಕಣ್ಣಿನ ಮೂಲಕ ವ್ಯಕ್ತಿ ನೋಡು ತ್ತಾನೆ. ಕಿವಿಯಿಂದ ಕೇಳುತ್ತಾನೆ. ಮೂಗಿನಿಂದ ವಾಸನೆ ತಿಳಿಯುತ್ತಾನೆ. ನಾಲಗೆಯಿಂದ ಮಾತನಾಡುತ್ತಾನೆ. ಇತ್ಯಾದಿ ಈ ಉದಾಹರಣೆಗಳಿಂದ ನಮಗೆ ತಿಳಿಯುವುದೇನೆಂದರೆ ಕಣ್ಣು ಇತ್ಯಾದಿ ಇಂದ್ರಿಯಗಳು ಪ್ರತ್ಯೇಕ ವಾದವುಗಳೆಂದೇ, ನಿಶ್ಚಯ ಮಾಡಬಹುದು.

ಕಟ್ಟಿಗೆಯಲ್ಲಿ ಬೆಂಕಿಯೂ, ಹಾಲಿನಲ್ಲಿ ತುಪ್ಪವೂ ಇದ್ದು ಹೇಗೆ ಅಗೋಚರವೋ? ಹಾಗೆಯೇ ಆತ್ಮವೂ ಶರೀರದಲ್ಲಿ ಇದ್ದು ಅಗೋಚರ (ಕಾಣದೆ) ಇರುತ್ತದೆ...

ಯಾವಾಗ ಆತ್ಮವು ತನ್ನ ಸ್ವರೂಪವನ್ನು ಅರಿತುಕೊಳ್ಳುವುದೋ ಆಗ ಧರ್ಮಾಚರಣೆಯಲ್ಲಿ ಪ್ರಯತ್ನಿಸುವುದು. ಜನ್ಮಾಂತರಗಳಿಂದ ಅಂಟಿಕೊಂಡು "ಬಂಧ"ವಾಗಿರುವ ಕರ್ಮಾಣುಗಳನ್ನು ಭೇದಿಸಿಕೊಂಡು ಜನನ-ಮರಣಗಳನ್ನು ನೀಗಿ, ಅಮರತ್ವ ಹೊಂದಿ, ಅಚಲವಾದ ಮತ್ತು ಅಖಂಡವಾದ ಸುಖ – ಶಾಂತಿ ಆನಂದವನ್ನು ಮೋಕ್ಷದಲ್ಲಿ ಅನುಭವಿಸುವುದು...

ಮುಖ್ಯಾಂಶವೇನೆಂದರೆ, ಅನೇಕ ಪ್ರಮಾಣಗಳಿಂದ "ಆತ್ಮ" ಎಂಬ ಒಂದು ವಸ್ತು ಇದೆ ಎಂಬುದು ಸ್ಥಿರವಾಯಿತು. ಆತ್ಮನು ಸಿದ್ಧವಸ್ತುವಾಗಿದೆ. ಈ ಲೋಕವನ್ನು ಬಿಟ್ಟು ಪರ ಲೋಕಕ್ಕೆ ಹೋಗುವ ಶಕ್ತಿಯುಳ್ಳದ್ದಾಗಿದೆ. ಈ ಶರೀರಕ್ಕೆ ಆ ಆತ್ಮ ಪರಲೋಕದಿಂದ ಬಂದಿದೆ. ಆಯುಷ್ಯಕರ್ಮ ಮುಗಿದೊಡನೆ ಈ ಶರೀರ ಬಿಟ್ಟು ಮತ್ತೊಂದು ಶರೀರವನ್ನು ಸೇರುತ್ತದೆ. "ಆತ್ಮ" ಎಂಬ ವಸ್ತು, ಅಖಂಡ-ಅಮರ-ನಾಶರಹಿತವಾದದ್ದು ಆಗಿದೆ. ಆದರೂ ಕರ್ಮದ ಅಧೀನನಾಗಿ ಜನನ ಮರಣಗಳ ಚಕ್ರಕ್ಕೆ ಸಿಲುಕಲೇಬೇಕಾಗಿದೆ. ಕಟ್ಟಕಡೆಗೆ ಪ್ರಯತ್ನಪಟ್ಟರೆ, ಕರ್ಮಗಳನ್ನು ಬಿಡುಗಡೆಗೊಳಿಸಿದರೆ, ತನ್ನ ಮೂಲಸ್ವಭಾವವಾದ, ನಿತ್ಯಾನಂದಮಯವಾದ ಸ್ವರೂಪವನ್ನು ಹೊಂದಿ ಪರಮಾತ್ಮನೆಂದಾಗುವುದು.

ಲೋಕದಲ್ಲಿ ಅನಂತ ಆತ್ಮರುಗಳಿದ್ದಾರೆ. ಅವರಲ್ಲಿ ಸಂಸಾರಾತ್ಮರೆಂದೂ, ಮುಕ್ತಾತ್ಮರೆಂದೂ ಎರಡು ಭೇದಗಳಿವೆ. ಸಂಸಾರಾತ್ಮರಿಗೆ ಬದ್ಧಾತ್ಮರೆಂದೂ, ಜೀವಾತ್ಮರೆಂದೂ, ಮುಕ್ತಾತ್ಮರಿಗೆ ಪರಮಾತ್ಮರೆಂದೂ ಬೇರೆ ಬೇರೆ ಹೆಸರುಗಳಿವೆ.

ಕರ್ಮಗಳ ಅಧೀನಕ್ಕೆ ಒಳಗಾಗಿ ನರಕ–ತಿರಿಯಂಚ–ಮನುಷ್ಯ ಮತ್ತು ದೇವಗತಿಗಳಲ್ಲಿ ತಿರುಗಾಡುತ್ತಿರುವ ಆತ್ಮರುಗಳಿಗೆ ಸಂಸಾರಾತ್ಮ–

ಬದ್ಧಾತ್ಮ ಹಾಗೂ ಜೀವಾತ್ಮರುಗಳೆಂದು ಹೆಸರು. ಜನ್ಮ-ಜನ್ಮಾ
ಗಳಿಂದ ಈ ಆತ್ಮನಿಗೆ ಅಂಟಿಕೊಂಡು ಬಂದಿರುವ ಜ್ಞಾನಾವರಣೀಯ
ದರ್ಶನಾವರಣೀಯ-ಮೋಹನೀಯ ಮತ್ತು ಅಂತರಾಯ ಕರ್ಮಗ
ಘಾತಿಕರ್ಮಗಳೆಂದೂ, ಉಳಿದ ವೇದನೀಯ-ಆಯುಷ್ಯ-ನಾಮ ಮ
ಗೋತ್ರಗಳೆಂಬ ನಾಲ್ಕು ಕರ್ಮಗಳಿಗೆ ಅಘಾತಿಕರ್ಮಗಳೆಂದೂ ಹೆ
ಗಳಿವೆ..

ನೀರಿನ ಸ್ವಾಭಾವಿಕ ಗುಣ ಶೈತ್ಯ. ಈ ನೀರಿಗೆ ಬೆಂಕಿಯ ಸಂಪ
ದಿಂದ ತನ್ನ ಸ್ವಾಭಾವಿಕ ಗುಣವಾದ ಶೈತ್ಯವು ದೂರವಾಗಿ ಉಷ್ಣಗುಣ
ಪ್ರದರ್ಶನಕ್ಕೆ ಬರುತ್ತದೆ. ಇದೇ ರೀತಿ ಆತ್ಮನ ಸ್ವಾಭಾವಿಕವಾದ ಅನ
ಜ್ಞಾನ-ಅನಂತದರ್ಶನ - ಅನಂತಸುಖ - ಅನಂತಶಕ್ತಿ - ಅವ್ಯಾಬಾಧತ್ವ
ಸೂಕ್ಷ್ಮತ್ವ - ಅವಗಹನತ್ವ - ಅಗುರುಲಘುತ್ವ ಎಂಬ ಎಂಟು ವಿಧವಾ
ಶ್ರೇಷ್ಠತೆಗಳು, ಮೇಲೆ ಹೇಳಿದ ಜ್ಞಾನಾವರಣಾದಿ ಎಂಟು ವಿಧದ
ಕರ್ಮಗಳ ಸಂಪರ್ಕದಿಂದ ಮರೆಯಾಗಿ, ಅಜ್ಞಾನಾದಿ ಗುಣಗಳು ಆ
ನಲ್ಲಿ ಅಭಿವ್ಯಕ್ತವಾಗುತ್ತದೆ...

ಬೆಂಕಿಯ ಸಂಪರ್ಕವು ದೂರವಾದಂತೆ ನೀರಿನ ಶೈತ್ಯ ಗುಣ
ಸ್ವಾಭಾವಿಕವಾಗಿ ಹೊರಸೂಸಿ ನಿಜಸ್ವಭಾವವು ಪ್ರಕಟವಾಗುವಂತೆಯೆ
ಅನಾದಿಕರ್ಮದಿಂದ ಬದ್ಧನಾದ ಆತ್ಮನು ಸಕಲ ಕರ್ಮ ಸಮೂ
ಗಳನ್ನು ಸಮ್ಯಗ್ದರ್ಶನ-ಜ್ಞಾನ-ಚಾರಿತ್ರ ಪೂರ್ವಕವಾದ ಧ್ಯಾನ-ತಪ
ಗಳಿಂದ ಸಂಪೂರ್ಣ ನಾಶವಾದರೆ ಆತ್ಮ ಪ್ರವೇಶದಿಂದ ಬಿಡುಗಡೆಗೊ
ಸಿದರೆ, ಆಗ ಕರ್ಮಜನ್ಯವಾದ ಅಜ್ಞಾನಾದಿ ವಿಭಾವಗುಣಗಳು ದೂ
ವಾಗಿ ತನ್ನ ಸ್ವಾಭಾವಿಕವಾದ ಅನಂತಜ್ಞಾನಾದ್ಗಿಗಳು ಪ್ರಕಾಶಕ್ಕೆ ಬ
ತ್ತವೆ. ಆಗ ಬದ್ಧಾತ್ಮ ವ-ಜೀವಾತ್ಮನು "ಪರಮಾತ್ಮ"ನಾಗಿ ಆಗುತ್ತಾನೆ..

ಲೋಕದಲ್ಲಿ ಸುವರ್ಣಪಾಷಾಣ ಮತ್ತು ಅಂಧಪಾಷಾಣಗಳೆಂ
ಎರಡು ವಿಧದ ಕಲ್ಲುಗಳಿರುತ್ತವೆ. ಅವುಗಳಲ್ಲಿ ಅಂಧಪಾಷಾಣವೆಂ
ಕಲ್ಲು ಎಂದೆಂದಿಗೂ ಬಂಗಾರವಾಗಲಾರದು. ಸುವರ್ಣಪಾಷಾಣವೆಂ
ಕಲ್ಲು ಮಾತ್ರ ಯೋಗ್ಯವಾದ ಯಂತ್ರೋಪಕರಣ-ದ್ರಾವಕ ಮೊದಲಾ
ಸಾಧನಗಳ ಸಂಯೋಜನೆಯಿಂದ ಬಂಗಾರವಾಗುತ್ತದೆ...

ಇದರಂತೆ ಲೋಕದಲ್ಲಿ ಭವ್ಯಾತ್ಮರೆಂದೂ, ಅಭವ್ಯಾತ್ಮರೆಂದೂ ಎರಡು ವಿಧವಾದ ಆತ್ಮರುಗಳಿರುತ್ತಾರೆ. ಇದರಲ್ಲಿ ಅಭವ್ಯಾತ್ಮರು ಎಂದೆಂದಿಗೂ ಕರ್ಮಗಳಿಂದ ಬಿಡುಗಡೆ ಹೊಂದಿ ಆತ್ಮನ ಸ್ವಾಭಾವಿಕವಾದ ಅನಂತಜ್ಞಾನಾದಿಗುಣಗಳನ್ನು ಪಡೆಯುವುದೇ ಇಲ್ಲ... "ಭವ್ಯ" ಆತ್ಮರಾದರೋ ಸರಿಯಾದ ಉತ್ತಮ ದ್ರವ್ಯ-ಕಾಲ-ಕ್ಷೇತ್ರ ಮತ್ತು ಭಾವಗಳ ಸತ್ಸಂಬಂಧದಿಂದ ಕರ್ಮ ವಿಮುಕ್ತರಾಗಿ ತನ್ನ ನಿಜಸ್ವರೂಪ ಅಂದರೆ ಅನಂತಜ್ಞಾನಾದಿ ಗುಣಗಳನ್ನು ಹೊಂದಿ "ಪರಮಾತ್ಮ" ಅವಸ್ಥೆಯನ್ನು ಹೊಂದುತ್ತಾರೆ...

ಮೇಲೆ ಹೇಳಿದ ಸುವರ್ಣಪಾಷಾಣದಲ್ಲಿ ಕಲ್ಲಿನಂಶವೂ, ಬಂಗಾರದಂಶವೂ ಸೇರಿಕೊಂಡಿದೆ. ಈ ಅಂಶಗಳು ಮೊದಲು ಬೇರೆ ಬೇರೆಯಾಗಿದ್ದು ಆಮೇಲೆ ಒಟ್ಟಿಗೆ ಸೇರಿದವುಗಳಲ್ಲ. ಅವು ಅನಾದಿಕಾಲದಿಂದಲೂ ಜೊತೆಯಾಗಿ ಸೇರಿಕೊಂಡೇ ಇರುತ್ತವೆ. ಹಾಗೆಯೇ ಕರ್ಮಬಂಧನಕ್ಕೆ ಒಳಗಾದ ಭವ್ಯಾತ್ಮರು ಕೂಡಾ ಅವರಲ್ಲಿ ಸೇರಿರುವ ಕರ್ಮವು ಮೊದಲು ಬೇರೆ ಬೇರೆಯಾಗಿದ್ದು ಆಮೇಲೆ ಸೇರಿಕೊಂಡವುಗಳಲ್ಲ. ಅದು ಅನಾದಿಕಾಲದಿಂದಲೂ ಜೊತೆಯಾಗಿ ಸೇರಿಕೊಂಡೇ ಇರುತ್ತವೆ. ಸುಯೋಗ್ಯ ಸಾಧನ ಸಾಮಾಗ್ರಿಗಳಿಂದ ಸುವರ್ಣಪಾಷಾಣದಲ್ಲಿರುವ ಕಲ್ಲಿನ ಅಂಶವು ಅಂದರೆ, ಕಲ್ಮಶವು ದೂರವಾಗಿ ಶುದ್ಧಸುವರ್ಣವು ಪ್ರಕಟವಾಗುವಂತೆ, ಉತ್ತಮವಾದ ದ್ರವ್ಯ-ಕ್ಷೇತ್ರ-ಕಾಲ-ಭಾವಗಳು ಅಂದರೆ ತಪ; ಕ್ಲೇಶವನ್ನು ಸಹಿಸಬಲ್ಲ ಉತ್ತಮವಾದ ಶರೀರ, ಆರ್ಯಖಂಡ, ಕರ್ಮಭೂಮಿ, ಉತ್ಸರ್ಪಿಣಿಯುಗದ ತೃತೀಯ ಕಾಲ, ಅವಸರ್ಪಿಣಿಯುಗದ ಚತುರ್ಥಕಾಲ, ಸಮ್ಯಕ್ತ್ವದಿಂದೊಡಗೂಡಿದ ಪರಿಣಾಮ, ಇತ್ಯಾದಿ ಸುಯೋಗ್ಯವಾದ ಸಾಧನಗಳು ಭವಾತ್ಮನಿಗೆ ದೊರೆತಾಗ, ಆ ಸುಸಮಯದಲ್ಲಿ ಪ್ರಯತ್ನ ಮಾಡಿದರೆ ಕರ್ಮಕಲ್ಮಶಗಳು ದೂರ (ಬಿಡುಗಡೆ) ಆಗಿ ಪರಮಾತ್ಮಸ್ವರೂಪ ಪ್ರಕಟವಾಗುವುದು. ಯಾಕೆಂದರೆ, ಅಕ್ಕಿಯೊಡನೆ ಹೊಟ್ಟು-ಸಿಪ್ಪೆಗಳು ಅನಾದಿಯಿಂದಲೇ ಸೇರಿಕೊಂಡಿರುತ್ತವೆ. ಆ ಭತ್ತವನ್ನು ಕುಟ್ಟಿ ಹೊಟ್ಟನ್ನೂ, ಅಕ್ಕಿಯನ್ನೂ ಬೇರೆ ಬೇರೆಯಾಗಿ ಮಾಡಿದನಂತರ ಅಕ್ಕಿಗೆ ಆಮೇಲೆ ಹೊಟ್ಟಿನ ಸಂಪ

ರ್ಕವು ಇರಲಾರವು... ಹಾಗೆಯೇ ಅನಾದಿಯಿಂದಲೂ ಕರ್ಮ
ನಾದ ಭವ್ಯಾತ್ಮನು ಉತ್ತಮವಾದ ದ್ರವ್ಯಾದಿ ಕಾಲಗಳು ದೊರೆತ
ಸ್ವಪ್ರಯತ್ನದಿಂದ, ಕರ್ಮಗಳಿಂದ ಬಿಡುಗಡೆಯಾಗಿ ಪರಿಶುದ್ಧನ
ಬಳಿಕ ಆ ಆತ್ಮನಿಗೆ ಎಂದಿಗೂ ಕರ್ಮದ ಸಂಬಂಧವಿರಲಾರದು.

ಆತ್ಮನ ಮನಸ್ಸು (ಪರಿಣಾಮು) ಹಿಂಸೆಯೇ ಮೊದಲಾದ ಅಶ
ವಿಷಯಗಳಲ್ಲಿ ತಲ್ಲೀನವಾದರೆ, ಪಾಪಕರ್ಮಗಳು ಆತ್ಮನಿಗೆ ಅಂಟಿ, ಆತ್ಮನು
ರಿಂದಾಗಿ ದುಃಖ ಪ್ರಾಪ್ತವಾಗುತ್ತದೆ. ಹಾಗೆಯೇ ಮನಸ್ಸು ಶು
ವಿಚಾರದಲ್ಲಿ ತನ್ಮಯವಾದರೆ ಶುಭ ರೂಪವಾದ ಕರ್ಮಗಳು ಆತ್ಮಕ್ಕೆ
ಕೊಂಡು ಇದರಿಂದ ಸುಖ ಪ್ರಾಪ್ತವಾಗುತ್ತವೆ...

ಅಜ್ಞಾನಿಯಾದ ಮನುಷ್ಯನು ಶರೀರ-ಗೃಹ- ಪತ್ನಿ- ಪುತ್ರ- ಮಿತ್ರ
ಶತ್ರುವೇ ಮೊದಲಾದ ಅಂದರೆ ಆತ್ಮನಿಂದ ಭಿನ್ನವಸ್ತುಗಳನ್ನು ತ
(ಆತ್ಮೀಯ) ವಸ್ತುಗಳನ್ನಾಗಿ ತಿಳಿಯುತ್ತಾನೆ.

ಸಾಯಂಕಾಲದಲ್ಲಿ ಪಕ್ಷಿಗಳು ಬೇರೆ ಬೇರೆ ದಿಕ್ಕುಗಳಿಂದಲೂ
ಊರುಗಳಿಂದಲೂ ಬಂದು, ರಾತ್ರಿ ಮುಗಿಯುವ ತನಕ ಒಂದು ಮ
ದಲ್ಲಿ ವಾಸಮಾಡುತ್ತವೆ. ಆಮೇಲೆ ಬೆಳಗಾದೊಡನೆ ತಮ್ಮ ಕಾಯ
ನಿಮಿತ್ತವಾಗಿ ಬೇರೆ ಬೇರೆ ದಿಕ್ಕು- ಊರುಗಳಿಗೆ ಹೊರಟುಹೋಗುತ್ತ
ಆ ಪಕ್ಷಿಗಳೆಲ್ಲಾ ಒಂದೇ ದಿಕ್ಕಿನಿಂದ ವ ಒಂದೇ ದೇಶದಿಂದ ಬಂದವುಗಳ
ಅಲ್ಲ. ತಿರುಗಿ ಒಂದೇ ದಿಕ್ಕಿಗೆ ಹೋಗುವುದೂ ಇಲ್ಲ...

ಇದರಂತೆ ಒಂದೇ ಕುಟುಂಬದಲ್ಲಿರುವ ತಂದೆ-ತಾಯಿ-ಮಕ್ಕಳು
ಅಣ್ಣ - ತಮ್ಮ ಮೊದಲಾದ ಬಂಧುಗಳು ಅವರವರ ಜನ್ಮಾಂತರ
ಕರ್ಮಾನುಸಾರವಾಗಿ ಬೇರೆ ಬೇರೆ ಗತಿಗಳಿಂದ ಬಂದು ಜನಿಸಿರುವರು
ಮೊದಲೇ ನಿರ್ಣಯವಾಗಿದ್ದ ಆಯುಷ್ಯವು ತೀರಿದೊಡನೆ ತಾವು ಸಂಪಾದಿ
ಸಿದ ಶುಭಾಶುಭ ಕರ್ಮಗಳಿಗೆ ಅನುಸಾರವಾಗಿ ಬೇರೆ ಬೇರೆ ಗತಿಗಳಿಗೆ
ಹೊರಟುಹೋಗುತ್ತಾರೆ. ಅವರೆಲ್ಲಾ ಒಂದೇ ಗತಿಯಿಂದ ಬಂದವರೂ
ಅಲ್ಲ. ಒಂದೇ ಗತಿಗೆ ಹೋಗುವವರೂ ಅಲ್ಲ. ತಾನಾರೊ? ಅವ
ರಾರೊ? ಅವರವರು ಸಂಪಾದಿಸಿದ ಪಾಪ- ವ- ಪುಣ್ಯ ಕರ್ಮಗಳು

ಮಾತ್ರ ಆ ಆತ್ಮರುಗಳೊಡನೆ ಹೋಗುವುದಲ್ಲದೆ ಇನ್ನಾರೂ ಹೋಗುವುದಿಲ್ಲ...

ಮೊಸರನ್ನು ಕಡೆಯಲು ಸಹಾಯಕವಾದ ಉದ್ದವಾದ ಹಗ್ಗದ ಎಳೆದಾಟಕ್ಕೆ ಸಿಕ್ಕಿದ ಕೋಲು (ಮಂತು) ಹಿಂದಕ್ಕೂ ಮುಂದಕ್ಕೂ ತಿರುಗುವಂತೆ ಅಜ್ಞಾನದಿಂದ ರಾಗದ್ವೇಷಾದಿಗಳಿಗೆ ವಶೀಭೂತವಾದ ಆತ್ಮನು, ಆ ಕರ್ಮಗಳ ಎಳೆದಾಟಕ್ಕೆ ಸಿಕ್ಕಿ, ಸ್ವರ್ಗಾದಿ ನರಕಗಳೆಂಬ ನಾಲ್ಕು ಗತಿಗಳ 84 ಲಕ್ಷ ಉತ್ಪತ್ತಿ ಸ್ಥಾನ (ಯೋನಿ)ಗಳಲ್ಲಿ ಜನನ ಮರಣಕ್ಕೆ ತುತ್ತಾಗಿ ಕೆಳಕ್ಕೂ ಮೇಲಕ್ಕೂ ಹೋಗುತ್ತಿರುತ್ತಾನೆ...

ಇಷ್ಟವಸ್ತುಗಳಲ್ಲಿ ಪ್ರೀತಿರೂಪವಾದ "ರಾಗ"ವೂ ಇಷ್ಟವಲ್ಲದ ವಸ್ತುಗಳಲ್ಲಿ "ದ್ವೇಷ"ವೂ ಇವು ಅನಾದಿಕಾಲದಿಂದ ಈ ಆತ್ಮ(ಜೀವ)ನ ಜೊತೆಯಾಗಿಯೇ ಇರುತ್ತವೆ. ಒಂದು ಪ್ರಕಾಶಕ್ಕೆ ಬರುವಾಗ ಮತ್ತೊಂದು ಮರೆಯಾಗುತ್ತದೆ. ಈ ರಾಗ-ದ್ವೇಷಗಳೇ ಭವಬಂಧನಕ್ಕೆ ಕಾರಣಗಳಾಗಿರುತ್ತವೆ. ಈ ಪರಂಪರೆಯು ಬೀಜ-ವೃಕ್ಷ ನ್ಯಾಯದಂತೆ ಅನಾದಿಯಾಗಿದೆ. ಈ ರಾಗದ್ವೇಷ ಪರಂಪರೆಯೆಂಬ ಹಗ್ಗವು ಕಡಿದು ಹೋಗದ ಹೊರತು ಜೀವ (ಆತ್ಮ)ನಿಗೆ ಭವಬಂಧನವು ತಪ್ಪಲಾರದು. ಈ ಬಂಧನ ಕಡಿದುಹೋಗಿ, ನಿತ್ಯಸುಖಿಯಾಗಬೇಕಾದರೆ ಈ ಜೀವನು ಪುತ್ರ-ಮಿತ್ರ-ಶತ್ರು ಮೊದಲಾದ ಇಷ್ಟಾನಿಷ್ಟವಸ್ತುಗಳಲ್ಲಿಯ ರಾಗ-ದ್ವೇಷಗಳನ್ನು ಬಿಟ್ಟು, ಭೇದ ವಿಜ್ಞಾನಿಯಾಗಿ ತನ್ನ (ಆತ್ಮ) ಸ್ವರೂಪ ಚಿಂತನೆಯಲ್ಲಿ ಆಸಕ್ತನಾಗಲೇಬೇಕು. ಹೀಗಾದರೆ ಜೀವನ ಪಾವನವಾಗುತ್ತದೆ.

ಕಾಡಿಗೆ ಬೆಂಕಿ ಬಿದ್ದು ಉರಿಯುತ್ತಿರುವಾಗ ಆ ಕಾಡಿನ ಮಧ್ಯದ ಮರದಲ್ಲಿರುವ ಅಜ್ಞಾನಿ ಮನುಷ್ಯನು, ತಾನೂ, ತಾನಿರುವ ಮರಕೂಡಾ ಸುಟ್ಟುಹೋಗಲಿದೆಯೆಂಬುದನ್ನು ತಿಳಿಯದೆ, ಆ ಕಾಡಿನಲ್ಲಿರುವ ಮೃಗಗಳೂ, ಮರಗಳೂ ಸುಡಲ್ಪಡುತ್ತವೆಯೆಂದು ತಿಳಿಯುವಂತೆ ಮೂಢಾತ್ಮನು ಬೇರೆಯವರ ಕಷ್ಟಪರಂಪರೆಯನ್ನು ನೋಡಿ "ಅವನು ಸತ್ತನು" "ಇವನು ರೋಗಿಯಾಗಿದ್ದಾನೆ" "ಆತನಿಗೆ ಬಂಧುವಿಯೋಗವಾಯ್ತು" ಇತ್ಯಾದಿಯಾಗಿ ಮಾತಾಡುತ್ತಿರುವನಲ್ಲದೆ, ತನಗೂ ಹಾಗೆಯೇ ಕಷ್ಟಪರಂ

ಪರಿಯೊದಗುವುದೆಂದು ತಿಳಿಯುವುದಿಲ್ಲ. ಈ "ಭವ" ಎಂಬ ಕಾ
ಜನ್ಮ-ಜರಾ-ಮರಣ ಸಹಜ ಶಾರೀರ ಮಾನಸಾಗಂತುಕ ದುಃಖ
ಕಾಡುಗಿಚ್ಚಿನಿಂದ ಬೆಂದು ಬೆಂಡಾಗುತ್ತಿರುವ ಪ್ರತಿಯೊಂದು ಪ್ರಾ
(ಜೀವಿ)ಗೂ ಆ ದುಃಖವು ತಪ್ಪಿದ್ದಲ್ಲವೆಂದು ತಿಳಿದು, ತಿಳಿದವನು ಶ್ರೀ
ರಿಂದ ಪಾರಾಗಲು ಪ್ರಯತ್ನ ಪಡಬೇಕಾದುದು ಆದ್ಯ ಕರ್ತವ್ಯವಾ
ಈ ರೀತಿ ಪ್ರಯತ್ನಿಸುವ ಜೀವಿಯ ಜೀವನ ಪಾವನವಾಗುವುದ
ಸಂಶಯವೇ ಇಲ್ಲ...

ಅನಿತ್ಯ ಹಾಗೂ ಅಸ್ಥಿರವಾದ ಈ ದೇಹದ ಸುಖಕ್ಕೋಸ್ಕರ
ಅಜ್ಞಾನಿಯು ಅಲ್ಲದ ಸಲ್ಲದ ಆಕೃತ್ಯಗಳನ್ನು ಮಾಡಲೂ ಹಿಂಜರಿಯು
ದಿಲ್ಲ...

ಮಲದ್ವಾರ – ಮೂತ್ರದ್ವಾರ – ಬಾಯಿ – ಮೂಗಿನ ಹೊಳ್ಳೆಗ
ಕಣ್ಣುಗಳು, ಕಿವಿಗಳು, ಈ ದ್ವಾರಗಳಿಂದ ಮಲ (ದುರ್ಗಂಧ)ವನ್ನು
ರೋಮಕೂಪಗಳಿಂದ ಬೆವರನ್ನೂ ಸುರಿಸುವ ದೇಹವು ಎಲುಬ
ಮಾಂಸ - ರಕ್ತ - ಮಲ - ಮೂತ್ರ ಮೊದಲಾದ ದುರ್ಗಂಧ ವಸ್ತುಗ
ವಾಸಸ್ಥಾನವಾಗಿದೆ. ಹೆಚ್ಚೇಕೆ? ಉತ್ತಮವೆನ್ನಿಸಿದ ಹಾಲು - ತುಪ್ಪ
ಫಲ - ಗಂಧ - ಪುಷ್ಪ ಮೊದಲಾದ ಶುಚಿ ವಸ್ತುಗಳು ಕೂಡಾ ಈ ಶರಿ
ಸಂಬಂಧ ಹೊಂದಿದೊಡನೆ ಅವೆಲ್ಲಾ ಅಶುಚಿಯಾಗುತ್ತವೆ. ಅಲ್ಲದೆ
ಶರೀರವು ಹಸಿವು - ಬಾಯಾರಿಕೆ - ರೋಗಾದಿ ಬಾಧೆಗಳಿಗೂ, ಜನ
ಜರಾ - ಮರಣಗಳೆಂಬ ತಾಪತ್ರಯಗಳಿಗೂ ಬಿಡಾರವಾಗಿದೆ. ಜ
ದಾರಭ್ಯ ಮರಣ ಪರ್ಯಂತ ಬಹಳ ಎಚ್ಚರಿಕೆಯಿಂದ ಕಾಪಾಡಿಕೊ
ಬೇಕಾಗುವುದು. ಸ್ವಲ್ಪವೇನಾದರೂ ಹೆಚ್ಚು ಕಡಿಮೆಯಾಯಿತೆಂ
"ಉಂಬೂಟ ಮಿಗಿಲಾಗೆ" — "ಏರುವ ಹಯಂಬೆಚ್ಚಲ್ಕೆ" "ನೀ
ಮೂಗಿನೊಳ್ ತುಂಬಲ್ ಪೋಗುತೆ ಮುಗ್ಗಿಯುಂ ಮರಣಮಕ್ಕು
ಎಂದು ಹೇಳುವಂತೆ ಈ ಶರೀರವು ಯಾವಾಗಲೂ ಅಪಾಯಕ್ಕೊ
ಗಾಗಿಯೇ ಇರುವುದು.

# ದೇಹದ ಮಮಕಾರ ಆತ್ಮೋನ್ನತಿಗೆ ಅಪಕಾರ

ದೇಹವೆಂದರೇನೇ "ನಾನು" ಎಂಬ ಭಾವನೆ ಎಲ್ಲೆಲ್ಲೂ ಕಾಣುತ್ತಿದೆ. ಯಾವ ವಿಚಾರವನ್ನು ಮಾಡದೆ ಈ ದೇಹದ ಬೆಳವಣಿಗೆಗಾಗಿ, ಮತ್ತು ಪೋಷಣೆಗಾಗಿ ಮನುಷ್ಯನು ಬಗೆಬಗೆಯ ಸಾಧನಗಳನ್ನು ನಿರ್ಮಿಸಿದ್ದಾನೆ. ಈ ದೇಹ, ಹಳೆಯದಾದರೂ, ಜೀರ್ಣವಾದರೂ ಹೇಗಾದರೂ ಮಾಡಿ ಅದನ್ನು ಅದನ್ನು ಗಟ್ಟಿಯಾಗಿ ಇರಿಸಬೇಕೆಂಬ ಪ್ರಯತ್ನ ಮನುಷ್ಯನದ್ದಾಗಿದೆ. ಆದರೂ ಈ ದೇಹವನ್ನು ಎಷ್ಟು ಕಾಪಾಡಿಕೊಂಡರೂ ಮರಣದ ವರೆಗೆ ಮಾತ್ರ. ಮರಣದ ಸಮಯ ಬಂದರೆ ಮತ್ತು ಒಂದು ಕ್ಷಣವೂ ಅದನ್ನು ಗಟ್ಟಿಯಾಗಿಡಿಸಲು ಸಾಧ್ಯವೇ ಇಲ್ಲ. ಮೃತ್ಯುವಿನೆದುರಿಗೆ ಎಲ್ಲಾ ಆಡಂಬರವೂ ನಿಂತು ಹೋಗುವುದು. ಈ ರೀತಿಯ ಅನಿತ್ಯವಾದ ದೇಹಕ್ಕಾಗಿ ಬಗೆಬಗೆಯ ಸಾಧನಗಳನ್ನು ಮನುಷ್ಯ ನಿರ್ಮಿಸುತ್ತಾನೆ. ಇದಕ್ಕಾಗಿ ರಾತ್ರಿ ಹಗಲೂ ದುಡಿಯುತ್ತಿರುತ್ತಾನೆ.

ದೇಹದ ಬೆಳವಣಿಗಾಗಿ ಮಾಂಸ ತಿಂದರೂ ಅಡ್ಡಿಯಿಲ್ಲವೆಂದು ಕೆಲವರು ಹೇಳುತ್ತಾರೆ. ಇದು ಪ್ರಕೃತಿಗೆ ವಿರುದ್ಧವಾದ ನಂಬಿಕೆಯಾಗಿದೆ. ಯಾಕೆಂದರೆ ಮಾನವನ ಪ್ರಕೃತಿಯು ಸಸ್ಯಾಹಾರಿಗೆ ಸಂಬಂಧಪಟ್ಟದ್ದಾಗಿದೆ. ಸಸ್ಯಾಹಾರಿಯ ಪ್ರಕೃತಿಯೇ ಬೇರೆ. ಮಾಂಸಾಹಾರಿಯ ಪ್ರಕೃತಿಯೇ ಬೇರೆಯೆಂದು ನೋಡುವಾಗಲೇ ತಿಳಿಯುತ್ತದೆ. ಮಾಂಸಾಹಾರಿ ಪ್ರಕೃತಿ ಹೇಗೆಂದರೆ, ಚೂಪಾದ ಹಲ್ಲುಗಳೂ, ಮತ್ತು ಕ್ರೂರವಾದುದೂ. ಒಳಗೆ, ಹೊರಗೆ ಸಂಚಾರವಾಗುವ ಉಗುರುಗಳೂ, ರಾತ್ರಿಯಲ್ಲಿ ಸ್ಪಷ್ಟವಾಗಿ ಕಾಣಲು ಸಹಕಾರಿಯಾದ ಕಣ್ಣುಗಳೂ, ಉದ್ದವಾದ ಮತ್ತು ತೆಳುವಾದ ನಾಲಿಗೆ, ಇತ್ಯಾದಿ ಅಂಗೋಪಾಂಗಗಳು ಕೂಡಿರುವುದಾಗಿದೆ. ಇದಕ್ಕೆ ವಿರುದ್ಧವಾದ ಪ್ರಕೃತಿ ಸಸ್ಯಾಹಾರಿಗಳದ್ದು. "ಅಂಗೈ ನೋಡಲು ಕನ್ನಡಿ ಏಕೆ?" ಎಂಬಂತೆ ಈ ವಿಚಾರ ಮಾನವನು ತಿಳಿದು ತಿಳಿದೂ ಅಸ್ಥಿರವಾದ ಈ ಜಡ ದೇಹದ ಪೋಷಣೆಗಾಗಿ ಮನುಷ್ಯನು ಮಾಂಸಾಹಾರಕ್ಕೆ ಮೆಚ್ಚುತ್ತಾನೆ. ಪಶು-ಪಕ್ಷಿಗಳ ದೇಹಕ್ಕೆ ಬೆಲೆ

ಕಡಿಮೆಯೇ? ಮನುಷ್ಯನ ದೇಹಕ್ಕೆ ಮಾತ್ರ ಹೆಚ್ಚು ಬೆಲೆಯೇ? ಉ ವುದು - ಕುಡಿಯುವುದು - ಮಲಗುವುದು, ಮೊದಲಾದ ಕ್ರಿಯೆ ಮನುಷ್ಯನಿಗಿಂತ ಮೃಗ-ಪಕ್ಷಿಗಳು ಏನೂ ಕಡಿಮೆಯಿಲ್ಲವೆಂದು ರಿಸಿ ವಿಮರ್ಶೆ ಮಾಡಿದರೆ ತಿಳಿಯಬಹುದು.

ಮಾನವನು ಸಂಯಮದಿಂದಿದ್ದು, ಸಕಲ ಜೀವಿಗಳ ಏಳಿಗೆಯ ಬಯಸಿ. ಎಲ್ಲರನ್ನೂ ರಕ್ಷಿಸುವ ನಡೆ-ನುಡಿಗಳನ್ನು ಹೊಂದಿ, ತನ್ನ ಅಂದರೆ ತನ್ನಾತ್ಮನನ್ನು ಉದ್ಧಾರ ಮಾಡುವ ಕಾರ್ಯದಲ್ಲಿ ಮು ವರಿದು ದುಡಿಯುತ್ತಿದ್ದರೆ ಮಾತ್ರ ಮಾನವನು ಶ್ರೇಷ್ಠನೆಂದು ಕ ಬಹುದು. ಇದಕ್ಕೆ ವಿರುದ್ಧವಾದರೆ ಮಾನವನು ಪಶುವಿಗಿಂತಲೂ ಕೀ ದರ್ಜೆಯೇ ಸರಿ. ಬೇರೊಂದು ಜೀವಿಯನ್ನು ಕೊಂದು, ಅದರ ಮಾ ವನ್ನು ತಿಂದು ಕ್ರೂರ ಮೃಗಗಳಂತೆ ಮನುಷ್ಯನೂ ಮಾಂಸಭಕ್ಷ ಮಾಡುವುದಾದರೆ ಮಾನವ ಜನ್ಮದ ಶ್ರೇಷ್ಠತೆಯ ಆಧಾರವನ್ನೇ ಉರುಳ್ಳಿದೆ ದಂತಾಗುತ್ತದೆ. ಅಂದರೆ ತಾನು ಕುಳಿತಿರುವ ಮರದ ಕೊಂಬೆ ಬುಡವನ್ನೇ ಮುರಿದುಹಾಕಲು ಯತ್ನಿಸುತ್ತಿರುವ ಅಜ್ಞಾನಿಯ ಕ್ರಿಯೆ ಆದೀತು.

ಯಾವ ರೀತಿಯ ಆಹಾರದಿಂದ ಬುದ್ಧಿಯು ಸಾತ್ವಿಕವಾದೀತು ಎಂಬುದರ ಕಡೆಗೆ ಮನಸ್ಸೇ ಇಲ್ಲ. ಮನಸ್ಸು ಒಳ್ಳೆಯದಾಗಲು ಬು ನಿರ್ಮಲ ಮತ್ತು ತೇಜಸ್ವಿಯಾಗಲು ಏನು ಮಾಡಬೇಕು? ಯಾವುದಾದ ಸಹಾಯ ಪಡೆಯಬೇಕು? ಎಂಬುದನ್ನು ಮನುಷ್ಯ ಯೋಚಿಸುವುದಿಲ್ಲ ಶರೀರದ ತೂಕ-ಬಣ್ಣ ಹೇಗೆ ಹೆಚ್ಚಾಗಬಹುದು ಎಂಬುದರ ಕಡೆ ಮಾತ್ರ ಯೋಚಿಸಿರುತ್ತಾನೆ. ದೇಹವೇ ಗುರಿಯಲ್ಲ, ಬರೀ ಸಾ ಮಾತ್ರ. ಮನಸ್ಸನ್ನು ಸಿಂಗರಿಸಬೇಕು, ಬುದ್ಧಿಯನ್ನು ಅರಳಿಸಬೇಕು ಹೃದಯವನ್ನು ಶುದ್ಧವಾಗಿರಿಸಿಕೊಳ್ಳಬೇಕು. ಇದು ಮಾನವನ ಕರ್ತವ್ಯ ಮತ್ತು ಲಕ್ಷಣ.

ದೇಹದ ಒಳಗಿರುವ ಅವಿನಾಶ, ನಿಷ್ಕಲಂಕ, ಆಗಿರುವ ಆ ನಾನು. ಈ ಆತ್ಮತತ್ವಕ್ಕಾಗಿ ಈ ದೇಹ ತನಗೆ ದೊರೆತಿದೆ. ಈ ಆ ನನ್ನು ಉಜ್ವಲಗೊಳಿಸಲುಬೇಕಾಗಿ ಈ ದೇಹವನ್ನು ನಾನು ಬೂ

ಮಾಡಲು ಕೂಡಾ ಸಿದ್ಧನಿದ್ದೇನೆ. ಈ ದೇಹದ ಮೇಲೆ ಸವಾರಿ ಮಾಡಲು ಬಂದವನು ನಾನು. ಅಲ್ಲದೆ ಈ ದೇಹವನ್ನು ಮೆರವಣಿಗೆ ಮಾಡಲಿಕ್ಕಲ್ಲ. ಒಬ್ಬ ಶ್ರೀಮಂತನು ಕೊಳೆಯಾದ ಬಟ್ಟೆಯನ್ನು ಬಿಸಾಡಿ ಹೊಸದಾದ ಬಟ್ಟೆಯನ್ನು ಧರಿಸುವಂತೆ, ಈ ದೇಹವೇ ಬೇರೆ, ಈ ಆತ್ಮನೇ ಬೇರೆ ಎಂದು ಸದಾ ಸ್ಮರಿಸುತ್ತಾ ವಿಚಾರಿಸುತ್ತಾ ಜಾಗ್ರತನಾಗಿರಬೇಕು.

ದೇಹದ ಮೇಲೆಯೇ ಆಸಕ್ತಿ ಇರುವ ತನಕ ಮತ್ತು ಭೀತಿ ...ಇರುವ ತನಕ ಆತ್ಮನ ನಿಜವಾದ ರಕ್ಷಣೆ ದೊರೆಯದು. ದೇಹದಲ್ಲಿರುವ ...ಆತ್ಮನ ವಿಚಾರವೇ ಇಲ್ಲದಿರುವ ತನಕ, ಮನುಷ್ಯ ಸಾಮಾನ್ಯ ಕ್ರಿಯೆ ...ಮಾಳಲ್ಲೇ ತೊಡಗಿರುತ್ತಾನೆ. ಹಸಿವಾದರೆ ಊಟಮಾಡುವುದು, ನೀರಡಿಕೆ ...ಂಸಭಕ್ಷ್ಯಾದರೆ ನೀರು ಕುಡಿಯುವುದು, ನಿದ್ದೆ ಬಂದರೆ ಮಲಗುವುದು ಇಷ್ಟು ...ಉರುಕ್ಕಲ್ಲದೆ ಬೇರೇನೂ ತಿಳಿಯುವುದಿಲ್ಲ. ಇದಕ್ಕಾಗಿ ಮನುಷ್ಯ ಜಗಳ ಮಾಡು ...ಹೊಂಬಿಕ್ತಾನೆ, ಆಶೆ ಮಾಡುತ್ತಾನೆ, ಲೋಭಿಯಾಗುತ್ತಾನೆ. ಇಂಥಾ ದೈಹಿಕ ...ನಿಯಕ್ರಿಯೆಗಳಲ್ಲಿಯೇ ಮಗ್ನನಾಗಿರುತ್ತಾನೆ. ಈ ದೇಹ, ನಶ್ವರ, ಆತ್ಮಸ್ಥಿರ, ಎಂದು ನಂಬಿ ತಿಳಿದು "ಕರ್ಮಯೋಗ" "ಭಕ್ತಿಯೋಗ"ಗಳೆಂಬ ...ವಾದೀಕ್ರಿಕ್ಕೆಗಳಿಂದ ಹಾರುತ್ತಾ ಸಾಧಕನಾದ ಮನುಷ್ಯನು ಕೊನೆಯ ಮೆಟ್ಟಿ ...ಲು ಬುನ್ನು ಏರಬೇಕು. ಐದೆಲ್ಲವನ್ನು ಸಾಧಿಸಲು ನೈತಿಕ ಸಾಧನೆಯ ದೃಢ ...ಸೂವ್ರುಪಾದ ತಳಹದಿಬೇಕು. ಸತ್ಯ-ಅಸತ್ಯಗಳನ್ನು ವಿಮರ್ಶಿಸಿ ಸತ್ಯವನ್ನೇ ...ಮವುದಿಸ್ವೀಕರಿಸಬೇಕು. ಸಾರಾಸಾರವನ್ನು ತಿಳಿದು ಅಸಾರವನ್ನು ಬಿಟ್ಟು ...ರ ಕಷ್ಟಾರವನ್ನೇ ಸ್ವೀಕರಿಸಬೇಕು.

"ದೇಹ" ಅಂದರೆ ಏನು? ಆತ್ಮದ ಸ್ವಭಾವವೇನು? ಇದನ್ನು ...ಸಬೇಕುವಿಚಾರಿಸಿ ಯಥಾರ್ಥವನ್ನು ತಿಳಿಯುವುದೇ ಸತ್ಯ. ಈ ವಿವೇಕ ತಿಳು ...ಕರ್ತವಳಿಕೆ ಮೈಗೂಡಿಸಬೇಕು. ತಿಳುವಳಿಕೆ ಅಂದರೆ "ಜ್ಞಾನ" ಇದನ್ನು ಅರಿತು ನಮ್ಮ ಬಾಳಿನಲ್ಲಿ ಒಡಗೂಡಿಸಬೇಕು, ಹೃದಯದಲ್ಲಿ ಸ್ಥಿರ ...ವ ಆಗೊಳಿಸಬೇಕು, ನಮ್ಮ ಕೈ-ಕಾಲು-ಕಣ್ಣಿನೊಳಗೆ ಜ್ಞಾನದ, ಪ್ರಭೆ ಬೆಳಗ ...ಆಬೇಕು. ಅಂದರೆ, ಜ್ಞಾನೇಂದ್ರಿಯಗಳೂ, ಕರ್ಮೇಂದ್ರಿಯಗಳೂ ...ಬೂವಿಚಾರಪೂರ್ವಕವಾಗಿಯೇ "ಕರ್ಮ" ಮಾಡುವಂತೆ ಆಗಿರಬೇಕು.

ಆತ್ಮನು ಸ್ವಯಂಪೂರ್ಣ. ಅದರ ಗತಿ ಸ್ವಾಭಾವಿಕವಾಗಿ ಊರ್ಧ್ವಗಾಮಿ. ಈ ದೇಹದ ಭಾರವು ಆ ಆತ್ಮನನ್ನು ಕೆಳಕ್ಕೆ ಯುತ್ತಾ ಇರುತ್ತದೆ. ಯಾವ ರೀತಿಯ ಉಪಾಯವಾದರೂ ದೇಹವನ್ನೂ, ಆತ್ಮನನ್ನೂ ಬೇರೆ ಬೇರೆಯಾಗಿ ಮಾಡಲು ಸಾಧ್ಯವಾ ಅದು ಪ್ರಗತಿಗೆ ದಾರಿಯಾಗುತ್ತದೆ.

ಪ್ರತಿಯೊಂದು ಜೀವಿಗಳ ಪ್ರಕೃತಿಯಲ್ಲಿ ಮೂರು ಗುಣ ಅಡಕವಾಗಿರುತ್ತವೆ. "ಆಯುರ್ವೇದ" ಶಾಸ್ತ್ರದಲ್ಲಿ ಕಫ-ವಾತ-ಪಿತ್ತ ಳಿದ್ದಂತೆ, ಈ ಪ್ರಕೃತಿಯಲ್ಲಿ ಸತ್ವ-ರಜ-ತಮ ಎಂಬ ಮೂರು ಗುಣಗ ತುಂಬಿರುತ್ತವೆ. ಇರುವುದೆಲ್ಲವೂ ಈ ಮೂರು ವಸ್ತುಗಳ ಮಸಾಲೆ ಸರಿ. ಒಂದೆಡೆ ಹೆಚ್ಚು, ಒಂದೆಡೆ ಕಮ್ಮಿ ಇಷ್ಟೇ ವ್ಯತ್ಯಾಸ. ಈ ಮೂ ರಿಂದ ಆತ್ಮನನ್ನೂ ಎಷ್ಟೆಷ್ಟು ದೂರ ಇಟ್ಟರೆ ಅಷ್ಟಷ್ಟು ಮಟ್ಟಿಗೆ ದೇ ದಿಂದ ಆತ್ಮನನ್ನು ದೂರವಿಡಲು ಸಾಧ್ಯವಾಗುತ್ತದೆ. ದೇಹದಿಂದ ಆ ನನ್ನು ಬೇರೆ ಮಾಡುವುದು ಎಂದರೆ, ಈ ಮೂರು ಗುಣಗಳನ್ನೂ ಪ ಕ್ಷಿಸಿ, ಅವುಗಳನ್ನು ಗೆಲ್ಲುವುದು ಎಂದು ಅರ್ಥ. ಈ ನಿಗ್ರಹದಿ ಒಂದೊಂದೇ ಗುಣ (ವಸ್ತು)ಗಳನ್ನು ಸೋಲಿಸುತ್ತಾ ಸೋಲಿಸುತ್ತಾ ಮುಖ್ಯ ವಸ್ತು (ಆತ್ಮ)ವಿನ ಬಳಿಗೆಹೋಗಿ ಸೇರಬೇಕು.

ವಿಚಾರಿಸಿದರೆ "ಕುರುಕ್ಷೇತ್ರ"ದಂತಿದೆ ನಮ್ಮ ದೇಹ. ಒಂದುಕ ದೈಹೀ ಸಂಪತ್ತು, ಇನ್ನೊಂದುಕಡೆ ಅಸುರೀದಂಪತ್ತುಗಳೆಂಬ ಎರಡು ಕಡೆಯ ಸೈನ್ಯಗಳ ದಂಡು (ಸಮೂಹ) ನಿಂತಿವೆ ಅಂದರೆ, ಅಂತಃಕರಣ ದಲ್ಲಿ ಒಂದುಕಡೆ ಸದ್ಗುಣ, ಇನ್ನೊಂದುಕಡೆ ದುರ್ಗುಣ ಎಂದು ಅರ್ಥ. ಇದರಲ್ಲಿ ಅಸುರೀಸಂಪತ್ತಯನ್ನು ತಪ್ಪಿಸಬೇಕು (ಗೆಲ್ಲಬೇಕು) ದೈವಿ ಸಂಪತ್ತಿಯನ್ನು ರಕ್ಷಿಸಬೇಕು. ಸತ್ಯ-ಅಹಿಂಸೆ ಇತ್ಯಾದಿ ದೈವೀಗುಣಗ ವಿಕಾಸವಾಗಬೇಕು. ಅದಕ್ಕಾಗಿ ಹೋರಾಡಬೇಕು. ಆತ್ಮನ ಶ್ರೇಯ ಸ್ಸನ್ನು ಬಯುಸುವವರು, ಅಸುರೀಸಂಪತ್ತನ್ನು ದೂರಮಾಡಬೇಕು. "ಅಸುರೀಸಂಪತ್ತು" ಅಂದರೆ, ಕಾಮ, ಕ್ರೋಧ, ಲೋಭ, ಮೋಹ, ಮಾಯಾ, ಮತ್ಸರ ಇವೇ ಆರು. ಆತ್ಮನ ನಿಜಗುಣವಾದ "ದೈವಿ

ಸಂಪತ್ತನ್ನು" ಸೂರೆಮಾಡುವ ಹಾಗೂ ನಾಶಮಾಡುವ ಶತ್ರುಗಳಾಗಿರುವರು. ಆದುದರಿಂದ ಇವರನ್ನು ಗೆಲ್ಲಬೇಕು. ಆದರೆ ಇದು ಬಾಯಿಯಲ್ಲಿ ಹೇಳುವಷ್ಟು ಸುಲಭವಲ್ಲ. ಇವರನ್ನೆಲ್ಲಾ ಸಂಪೂರ್ಣ ಗೆಲ್ಲಬೇಕಾದರೆ ಶಾಸ್ತ್ರೀಯವಾದ "ಸಂಯಮ"ದ ದಾರಿ ಹಿಡಿಯಬೇಕು.

ಇದಕ್ಕಾಗಿ ಪ್ರತಿಯೊಬ್ಬ ಸುಖಾಪೇಕ್ಷಿಯು, ದಿನದ ಪ್ರತಿಯೊಂದು ಸಮಯಗಳಲ್ಲಿಯೂ, ನಾನು? ನಾನಾರು? ನಾನು ಇಲ್ಲಿಗೆ ಎಲ್ಲಿಂದ ಬಂದವನು? ಮುಂದೆ ಎಲ್ಲಿಗೆ ಹೋಗುವವನು? ನಾನು ಇಲ್ಲಿದ್ದುಕೊಂಡು ಏನು ಮಾಡಿಹೆನು? ಇತ್ಯಾದಿ ಇತ್ಯಾದಿಯಾಗಿ, ತನ್ನಲ್ಲಿ ತಾನೇ ವಿಚಾರಿಸುತ್ತಿರಬೇಕು. ಹೀಗಾದರೆ ಮಾತ್ರ "ತನಗೆ ತಾನೇ ಸುಖಿ," ಇಲ್ಲದಿದ್ದರೆ, "ತನಗೆ ತಾನೇ ದುಃಖಿ" ಇದಕ್ಕೆ ತನ್ನ "ಆತ್ಮದರ್ಶನವೇ ಮುಖ್ಯ" ಸುಲಭ ಸಾಧನವಾಗಿದೆ. ಈ ಗ್ರಂಥದಲ್ಲಿರುವ 1ರಿಂದ 10ರ ತನಕ ಇರುವ ಚಿತ್ರಗಳನ್ನು ನೋಡಿ, ಅದರಂತೆಯೇ ಪ್ರತಿದಿನವೂ ಅಭ್ಯಾಸ ಮಾಡುತ್ತಿದ್ದರೆ ಹಿಂದಿನ ಕರ್ಮಗಳು ನಿರ್ಜರೆಯಾಗಿ, ನಿತ್ಯ ಸುಖಾನಂದಕ್ಕೆ ಬೇಕಾದ ರೀತಿಯಲ್ಲಿ ತನ್ನ "ಆತ್ಮ"ನು, ಪರಿಶುದ್ಧನಾಗುವನು. ಇದೇ ಈ ಗ್ರಂಥದಲ್ಲಿರುವ "ಆತ್ಮದರ್ಶನ– ಸುಲಭಸಾಧನ" ಎಂದಾಗಿರುವುದು.

## ಆತ್ಮದರ್ಶನ (ಧ್ಯಾನಸ್ವರೂಪ)

ವಸ್ತುಗಳ ಸ್ವರೂಪವನ್ನು ಶಾಂತಚಿತ್ತದಿಂದ ವಿಚಾರಮಾಡುತ್ತಿದ್ದರೆ ಮನಸ್ಸಿಗೆ ಶಾಂತಿ ಲಭಿಸುವುದು. ಮಾತ್ರವಲ್ಲ ವಿಚಾರಪೂರ್ವಕ ಧ್ಯಾನಿಸುತ್ತಿದ್ದರೆ ಸುಖದ ಪ್ರಾಪ್ತಿ ಅಥವಾ ಮೂಲವು ಸಿಗುತ್ತದೆ. ಕಡುದರಿದ್ರನಿಗೆ ಚಿಂತಾಮಣಿರತ್ನ ಸಿಕ್ಕಿದರೆ ಎಷ್ಟು ಆನಂದವಾಗುತ್ತದೋ ಅದಕ್ಕಿಂತಲೂ ಸಹಸ್ರಪಾಲು ಹೆಚ್ಚಾಗಿ ಈ ವಸ್ತುಸ್ವರೂಪ ಹಾಗೂ ತನ್ನ ಆತ್ಮಧ್ಯಾನದಿಂದ ಮಹಾ ಆನಂದವು ಲಭಿಸುವುದು. ಈ ಆನಂದವನ್ನು ವರ್ಣಿಸಲು ಸಾಧ್ಯವೇ ಇಲ್ಲ.

ಈ ರೀತಿಯ ಸತತ ಧ್ಯಾನಾಭ್ಯಾಸದಿಂದ ಪರಮಾನಂದ ಸ್ವ ವನ್ನು ಮುಟ್ಟಿದ ಈ ಜೀವ (ಆತ್ಮ)ಸಿಗೆ ಪರಮಪುರುಷನೆಂದೂ, ಪ ಮೇಶ, ಪರಂಜ್ಯೋತಿ, ಪರಬ್ರಹ್ಮನೆಂದೂ, ಹಾಗೇ ಅಜ, ಮುಕುಂ ನಿರಂಜನ, ನಿರಾಕಾರ, ಸರ್ವಜ್ಞ, ಸಿದ್ಧ, ಶಿವ, ಎಂದೂ ಹಲವಾ ಹೆಸರುಗಳಿವೆ. ಮೇಲಿನ ಯಾವ ಹೆಸರೇ ಆಗಲಿ, ಅದು ಪರ ಶುದ್ಧ "ಆತ್ಮ"ನೆಂದು ತಿಳಿಯಬೇಕು. ಯಾವ ಆತ್ಮನು ಪರಮಪವಿತ್ರ ಶುದ್ಧ ಸರ್ವಜ್ಞನಾಗಿದ್ದುಕೊಂಡು, "ಆತ್ಮದ್ರವ್ಯ"ವೆಂದರೇನು? "ತತ್ತ್ವ ಗಳೆಂದರೇನು? "ಮೋಕ್ಷ"ವೆಂದರೇನು? ಅಜೀವದ್ರವ್ಯಗಳ ಸ್ವಭಾ ವೇನು? ಇತ್ಯಾದಿ ವಿಷಯಗಳನ್ನು ವಿವರವಾಗಿ ತಿಳಿಸುತ್ತಾನೋ ಅಂತ "ಪರಮಾತ್ಮ" ವ "ಸದ್ಗುರು"ಸಿಗೆ ಮೊದಲನೆ ನಮಸ್ಕಾರ.

ವ್ಯವಹಾರನಯದಿಂದ ಆತ್ಮನು ಅನೇಕರೂಪನಾಗಿ ಕಂಡರೂ ನಿಶ್ಚಯನಯದಿಂದ ನೋಡುವಾಗ ಶುದ್ಧ, ನಿರ್ವಿಕಾರಿ. ಏಕರೂಪನಾ ಅನುಭವಿಸಲ್ಪಡುತ್ತಾನೆ. ಈ ಅನುಭವವೇ ನಿಶ್ಚಯವಾಗಿಯೂ ಮೋಕ್ಷಕ್ಕೆ ಹೋಗುವ ದಾರಿಯಾಗಿದೆ. ವ್ಯವಹಾರನಯದಿಂದ ಆತ್ಮನ ದರ್ಶನರೂಪ, ಜ್ಞಾನರೂಪ. ಮತ್ತು ಚಾರಿತ್ರರೂಪನಾಗಿ ಭಿನ್ನ ಭಿನ್ನ ರೂಪನಾಗಿ ಕಂಡರೂ ಅಭೇಧ ದೃಷ್ಟಿಯಿಂದ ಅಂದರೆ ನಿಶ್ಚಯನಯದಿಂ ಈ ಮೂರೂ ಒಟ್ಟುಗೂಡಿದ ಅಖಂಡ ಜ್ಞಾನ ಸಮುದ್ರವಾದ ಪರಮ ನಿರ್ಮಲ, ಏಕಸ್ವರೂಪಿಯಾಗಿರುವನು. ಈ ಅಭಿಪ್ರಾಯವನ್ನು ತಿಳಿದು ಧ್ಯಾನಿಸಿದರೆ ಮಾತ್ರ ಪರಮಾನಂದವು ತಲೆದೋರುವುದು. ವ್ಯವಹಾರ ನಯದಿಂದ ಈ ಆತ್ಮನು ಸಂಸಾರದಲ್ಲಿದ್ದು ಹಲವಾರು ಕಾರ್ಯ ಮಾಡು ತ್ತಿರುವನೆಂದು ಕಂಡರೂ ನಿಶ್ಚಯನಯದಿಂದ ಆತ್ಮನು ಸಮಸ್ತಕಾರ್ಯ ಗಳಿಂದಲೂ ಬಿಡುಗಡೆಹೊಂದಿದ ಪರಿಶುದ್ಧ ಆತ್ಮನಾಗಿಯೇ ಇರುವನು. ಅಂದರೆ ಸಂಸಾರದಲ್ಲಿಯ ಕಾರ್ಯಗಳನ್ನು ಮಾಡುತ್ತಿದ್ದರೂ ಅದರಲ್ಲಿ ಆಸಕ್ತನಾಗಿರುವುದಿಲ್ಲ. ಅಂದರೆ ನಿರ್ಲಿಪ್ತನಾಗಿರುವನೆಂದರ್ಥ.. ಭೇದ ಜ್ಞಾನದ ಮೂಲಕವಾಗಿಯೇ ಆತ್ಮಸ್ವರೂಪದ ಅನುಭವ ಒಂದರೆ ಅದೇ ಕರ್ಮದಿಂದ ಬಿಡುಗಡೆ ಹೊಂದುವುದಕ್ಕಿರುವ ಸಿದ್ಧಮಾರ್ಗವಾಗಿದೆ. ಇದೊಂದೇ ಮೋಕ್ಷಕ್ಕಿರುವ ದಾರಿ ಬೇರೆ ಯಾವ ಮಾರ್ಗವಿಲ್ಲ..

ಸಮ್ಯಗ್ದೃಷ್ಟಿಯಾದ ಜ್ಞಾನಿಯ ವೈರಾಗ್ಯವು ಒಂದು ಅಪೂರ್ವವಾಗಿರುತ್ತದೆ. ಹೇಗೆಂದರೆ ಒಬ್ಬ ರಾಜನು ತನ್ನ ಆಸ್ಥಾನದ ದರ್ಬಾರಿಗೆ ಹೋಗುತ್ತಿದ್ದಾಗ ಅಕಸ್ಮಾತ್ ಯಾರಾದರೊಬ್ಬರು ಮಧ್ಯೆ ಭೇಟಿಯಾದಾಗ ಅವರನ್ನು ಸಂತಯಿಸುವ ಕಾರ್ಯವನ್ನು ಮಾಡಿದರೂ, ಆ ಸ್ಥಾನಕ್ಕೆ ಹೋಗುವ ಮೂಲಧ್ಯೇಯವನ್ನು ಎಂದಿಗೂ ಮರೆಯಲಾಗದು. ಹಾಗೆಯೇ ಸಮ್ಯಗ್ದೃಷ್ಟಿಯಾದವನು ತನ್ನ ಸಂಸಾರದಲ್ಲಿಯ ಯಾವ ಕೆಲಸ ಮಾಡುತ್ತಿದ್ದರೂ, ತನ್ನ ಆತ್ಮನ ಉತ್ಕರ್ಷತೆಯನ್ನು ಮರೆಯಲಾಗನು. ಆದುದರಿಂದ ಅವನಿಗೆ ಕರ್ಮಬಂಧವಾಗಲಾರದು. ಕಮಲದ ಎಲೆಯು ನೀರಲ್ಲಿಯೇ ಇರುತ್ತಿದ್ದರೂ ಆ ನೀರನ್ನು ತಾನು ಅಂಟಿಕೊಳ್ಳದೆ ಇರುವಂತೆಯೇ ಪರಿಶುದ್ಧನಾಗಿರುತ್ತಾನೆ. ಹಾಗೂ ಈ ಮೂಲಕ ಕರ್ಮನಿರ್ಜರೆ ಮಾಡುತ್ತಿರುವನು. ಶ್ರೀ ಕೇವಲಿಗಳು ವ ಸರ್ವಜ್ಞರು ಹೇಳಿರುವ ವಸ್ತುಸ್ವರೂಪವನ್ನು ನಂಬಿ ಅದರಂತೆ ನಡೆದು ತನ್ನಾತ್ಮನನ್ನೇ ಚಿಂತಿಸಿ ಧ್ಯಾನಿಸುತ್ತಿದ್ದರೆ. ಕರ್ಮಕ್ಷಯವಾದೀತಲ್ಲದೆ ಇದರ ವಿರುದ್ಧವಾದ ಕಾರ್ಯಗಳಿಂದ ಕರ್ಮಬಂಧಗಳಾಗಿ ನಿತ್ಯಾನಂದ ಸುಖಪ್ರಾಪ್ತಿಯಾಗಲಾರದು.

ಸಂಸಾರಕ್ಕೆ ಸಾಧನವಾಗಿರುವ ರಾಗ-ದ್ವೇಷ ಮತ್ತು ಮೋಹ ಈ ಮೂರೂ ಇಲ್ಲದಿದ್ದು ಅನಂತಾನುಬಂಧಿಕಷಾಯ ಹಾಗೂ ಮಿಥ್ಯಾತ್ವ ಉದಯವಾಗಲಾರದು. ಆದುದರಿಂದ ಸಮ್ಯಗ್ದೃಷ್ಟಿಗೆ ಕರ್ಮಬಂಧವಾಗುವುವೇ ಇಲ್ಲ. ತನ್ನ ಕಣ್ಣುಗಳನ್ನು ಅರ್ಧಮುಚ್ಚಿಕೊಂಡೇ ಆತ್ಮನನ್ನು ಧ್ಯಾನಿಸುತ್ತಿರುವಾಗ ಅಪೂರ್ವವಾದ ಕಾಂತಿಯು ಅನುಭವಕ್ಕೆ ಬರುತ್ತದೆ. ಅಸ್ಥಿರವಾದ ಬಾಳಿನ ಸುಖದಲ್ಲಿಯೇ ತಲ್ಲೀನವಾದರೆ ಜನನ ಮರಣರೂಪಿಯಾದ ಸಂಸಾರಬಂಧನಕ್ಕೆ ಕಾರಣವಾಗುತ್ತದೆ. ದೇಹಾದಿ ಸಮಸ್ತವೂ ಅಸ್ಥಿರವೆಂದು ಗ್ರಹಿಸಿ, ತನ್ನ ಆತ್ಮ ಚಿಂತನೆಯಲ್ಲಿಯೇ ತಲ್ಲೀನನಾಗುತ್ತಿದ್ದರೆ ಇದು ಮೋಕ್ಷಪ್ರಾಪ್ತಿಗೆ ದಾರಿಯಾಗುತ್ತದೆ. ಅಜ್ಞಾನಿಯಾದ ಜೀವನು ತನಗೆ ಒದಗುವ ಸುಖ-ದುಃಖಾದಿಗಳು ಅನ್ಯರಿಂದ ಆಗುತ್ತದೆಂದು ಗ್ರಹಿಸಿ, ಅನ್ಯ (ಜೀವ)ರಲ್ಲಿ ರಾಗದ್ವೇಷಾದಿಗಳನ್ನು ತಾಳಿ ಸಂಸಾರ ಪರಿಭ್ರಮಣಕ್ಕೆ ಒಳಗಾಗುತ್ತಾನೆ. ಸುಜ್ಞಾನಿಯಾದರೋ?

ತನಗೆ ಒದಗುವ ಸುಖ-ದುಃಖಗಳು ತಾನು ಹಿಂದೆ ಅರ್ಜಿಸಿದ ಪುಣ್ಯ-ಪಾಪ ಕರ್ಮಗಳ ಉದಯದಿಂದಾಗಿದೆಯೆಂದು ತಿಳಿದು ಬೇರೊಬ್ಬರಲ್ಲಿ ರಾಗದ್ವೇಷಾದಿಗಳನ್ನು ತಾಳದೆ ತನ್ನ ಕರ್ಮನಿರ್ಜರೆಯನ್ನು ಮಾಡುತ್ತಾ ಕೊನೆಗೆ ಮೋಕ್ಷಕ್ಕೆ ಹೋಗುವನು.

ಜೀವ (ಆತ್ಮ)ನ ಲಕ್ಷಣ "ಚೇತನ"ಮಯ, ಮತ್ತು "ಜ್ಞಾನಮಯ"ವಾಗಿರುತ್ತದೆ. ಶರೀರವು ಜಡ (ಪುದ್ಗಲ) ರೂಪವಾಗಿದೆ. ಆತ್ಮನು ನಾಶರಹಿತನಾಗಿರುವನು. ಪುದ್ಗಲ (ಶರೀರ) ನಾಶವಾಗುತ್ತದೆ. ಸದ್ಗುರುವಿನ ಉಪದೇಶವೇನೆಂದರೆ, ನಾಶವಾಗುವ ಶರೀರಾದಿಗಳ ಮಮಕಾರವನ್ನು ತೊರೆದು, ತನ್ನಾತ್ಮನ ಚಿಂತನೆಯನ್ನು ಮಾಡುತ್ತಾ ನೀನು ಸುಖಿ (ಮುಕ್ತ)ಯಾಗು ಎಂದು ಹೇಳಿರುವರು. ಅಲ್ಲದೆ ಈ ದೇಹವು ಒಂದಲ್ಲ ಒಂದುದಿನ ನಾಶವಾಗತಕ್ಕದ್ದಾಗಿದೆ. ಅದೆಷ್ಟೋ ವಿಧಗಳಿಂದ ಈ ಶರೀರದ ಪೋಷಣೆ ಮಾಡುತ್ತಿದ್ದರೂ ದುಃಖವು ಹೆಚ್ಚುವುದಲ್ಲದೆ ಸುಖ ದೊರೆಯದು. ನಿತ್ಯಾನಂದ ಸುಖಾಪೇಕ್ಷೆಯಾದ ಜೀವನು ಸತತ ತನ್ನಾತ್ಮ ಚಿಂತನೆಯನ್ನು ಮಾಡುತ್ತಿರಬೇಕು. ಅಸ್ಥಿರವಾದ ಹಾಗೂ ನಾಶವಾಗುವ ಸಂಸಾರದಲ್ಲಿಯು ಪರವಸ್ತುವಿನ ಮೋಹದಿಂದ ಕರ್ಮಬಂಧಗಳು ಜಾಸ್ತಿಯಾಗುತ್ತವೆ. ಅಜ್ಞಾನಿಗಳು ನಶ್ವರವಾದ ದೇಹಾದಿ ಸುಖಗಳಿಗೆ ಮೆಚ್ಚಿ ದಿನಹರಣೆಮಾಡಿ ಕರ್ಮಗಳ ಆಸ್ರವದಿಂದ ನರಕಾದಿ ಚತುರ್ಗತಿಗಳಲ್ಲಿ ಪದೇ ಪದೇ ತಿರುಗುತ್ತಿರುವರು. ಸುಜ್ಞಾನಿಯಾದ ಜೀವಿಯು ಈ ನಶ್ವರವಾದ ವಸ್ತುಗಳಲ್ಲಿ ತಲ್ಲೀನನಾಗದೆ ನಿತ್ಯಾನಂದವನ್ನೀಯುವ ತನ್ನಾತ್ಮಸ್ವರೂಪವನ್ನೇ ಧ್ಯಾನಿಸಿ ಈ ಸಂಸಾರ ಸಾಗರದಿಂದ ಬಿಡುಗಡೆಹೊಂದಿ ಮೋಕ್ಷಕ್ಕೆ ಹೋಗುವನು.

ದಿನರಾತ್ರಿ ಪರವಸ್ತುವಿನ ಮೋಹ – ಮಮಕಾರದಲ್ಲಿರುವುದು "ಪ್ರಮಾದ" ಎಂದು ಆಗುತ್ತದೆ. ಈ "ಪ್ರಮಾದ" ದೋಷದಿಂದ ರಾಗಾದಿ ಕಷಾಯಗಳ ತೀವ್ರತೆ ಜಾಸ್ತಿಯಾಗಿ ಕರ್ಮಗಳ ಬಂಧವಾಗುತ್ತದೆ. ಆದುದರಿಂದ ಇವನ್ನೆಲ್ಲಾ ವಿಚಾರಿಸಿ ತನ್ನಾತ್ಮ ಧ್ಯಾನದಲ್ಲಿರುವುದು ಉತ್ತಮೋತ್ತಮವೆಂದು ತಿಳಿಯಬೇಕು. ತನ್ನಿಂದ (ಆತ್ಮನಿಂದ) ಬೇರೆಯಾದ ದೇಹಾದಿ ಪ್ರತಿಯೊಂದು ವಸ್ತುವಿನ ಚಿಂತನೆಗೆ "ಪರಮಾದದೋಷ"

ಎಂದು ಹೆಸರು. ನಾನು (ಆತ್ಮ) ಬೇರೆ, ದೇಹಾದಿಗಳೇ ಬೇರೆ, ನಾಟಕದ ಪಾತ್ರಧಾರಿಯಂತೆ ನಾನಿರುವೆನು. ನಾಟಕದಲ್ಲಿ ವಹಿಸಿಕೊಂಡ ಪಾತ್ರಧಾರಿ ವೇಷಕ್ಕೆ ಬೇಕಾದ ನಡೆನುಡಿಗಳಂತೆಯೇ ನಾನು ಆಚರಿಸುವ ಕ್ರಿಯೆಗಳಾಗಿರುತ್ತವೆ. ನನಗೆ ಮತ್ತು ಆ ವಸ್ತುಗಳಿಗೆ ಏನೊಂದೂ ಸಂಬಂಧವಿಲ್ಲ. ನಾನು ನಿತ್ಯನು, ಅದೆಲ್ಲಾ ಅನಿತ್ಯಗಳೆಂದು ಸದಾ ಚಿಂತಿಸಿ, ತನ್ನ ಆತ್ಮಧ್ಯಾನದಲ್ಲಿಯೇ ತಲ್ಲೀನನಾಗುವುದೇ ಮೋಕ್ಷಕ್ಕೆ ಸಾಧನವಾಗಿದೆ. ಅಂದರೆ ತನು-ಮನ-ವಚನ ಶುದ್ಧಿಯಿಂದ ಆತ್ಮಧ್ಯಾನ ಮಾಡಬೇಕು. ಹೀಗೆ ಮಾಡಿದ ಜೀವಿ ಮೋಕ್ಷಕ್ಕೆ ಅರ್ಹವೆಂದೂ ತಾತ್ಪರ್ಯ......

ವ್ಯವಹಾರ ಅಪೇಕ್ಷೆಯಿಂದ ದೇಹವೂ, ಆತ್ಮನೂ ಒಂದೇ ಎಂದು ತೋರಿದರೂ ನಿಶ್ಚಯದಿಂದ ಆತ್ಮನೇ ಬೇರೆ, ದೇಹವೇ ಬೇರೆಯಾಗಿದೆ. ಆತ್ಮನ ಗುಣಸ್ವಭಾವವೇ ಬೇರೆ, ಪುದ್ಗಲದ ಗುಣಸ್ವಭಾವಗಳೇ ಬೇರೆಯಾಗಿರುತ್ತದೆ. ಅಜ್ಞಾನಿಯಾದರೋ ದೇಹ ಮತ್ತು ಆತ್ಮವು ಒಂದೇ ಎಂದು ತಿಳಿದು ಸಂಸಾರದಲ್ಲಿಯೇ ಬಿದ್ದು ಬಳಲಿ ಸುತ್ತಾಡುತ್ತಿರುವನು. ಸುಜ್ಞಾನಿಯು ದೇಹ-ಆತ್ಮಗಳೆರಡೂ ಬೇರೆ ಬೇರೆಯೆಂದು ತಿಳಿದು ನಿತ್ಯ ಸುಖಾಪೇಕ್ಷೆಯಾಗಿ ದೇಹಾದಿಗಳಲ್ಲಿ ಆಸಕ್ತನಾಗದೆ ತನ್ನ ಆತ್ಮಚಿಂತನೆ ಮಾಡುತ್ತಾ ಮುಂದಕ್ಕೆ ಮೋಕ್ಷಪ್ರಾಪ್ತಿಗೆ ಅರ್ಹನಾಗುತ್ತಾನೆ.

ಸುಜ್ಞಾನಿ (ಸಮ್ಯಗ್ದೃಷ್ಟಿ) ಜೀವಿಯು ತನಗೆ ಬರುವ ಸುಖ-ದುಃಖಗಳೆಲ್ಲಾ ಹಿಂದಿನ ಜನ್ಮಗಳಲ್ಲಿ ತಾನೇಮಾಡಿ ಗಳಿಸಿದ ಪುಣ್ಯ-ಪಾಪ ಕರ್ಮಗಳ ಫಲವೆಂದು ತಿಳಿದು ಕರ್ಮನಿರ್ಜರೆಗೆ ಬೇಕಾದ ಆತ್ಮ ಧ್ಯಾನಾಭ್ಯಾಸದಿಂದ ಸಂಸಾರದಲ್ಲಿರುವ ಸಂಕಷ್ಟಗಳನ್ನು ನೀಗಿ ನಿತ್ಯಾನಂದ ಸುಖಕ್ಕೆ ಭಾಗಿಯಾಗುತ್ತಾನೆ. ಆತ್ಮನು "ಜ್ಞಾನಮಯ" "ಚೇತನಮಯ" ಮತ್ತು "ಚಿದಾನಂದಮಯ"ನಾಗಿರುವನು. ಪುದ್ಗಲರೂಪ ಕರ್ಮಗಳ ಸ್ವಭಾವವೇ ಬೇರೆ, ಆತ್ಮನ ಗುಣವೇ ಬೇರೆಯಾಗಿದೆ. ವ್ಯವಹಾರ ನಯಾಪೇಕ್ಷೆಯಿಂದ ಕರ್ಮಗಳ ಆಸ್ರವ ಮತ್ತು ಬಂಧಗಳಿಗೆ ಆತ್ಮನು ಕರ್ತನಾಗಿಯೂ, ಆ ಕರ್ಮಗಳ ಫಲಗಳನ್ನು ಅನುಭವಿಸುತ್ತಾನಾದ್ದರಿಂದ

ಭೋಕ್ತಾನಾಗಿಯೂ, ನಿಶ್ಚಯನಯಾಪೇಕ್ಷೆಯಿಂದ ಆತ್ಮನಿಗೂ, ಜಡ ರೂಪಿಯಾದ ಕರ್ಮಗಳಿಗೂ ಯಾವುದೊಂದೂ ಸಂಬಂಧವಿಲ್ಲ. ಆದುದರಿಂದ ಆತ್ಮನು ಕರ್ತನೂ ಅಲ್ಲ ಮತ್ತು ಭೋಕ್ತನು ಕೂಡಾ ಅಲ್ಲ ವೆಂದು ತಿಳಿಯಬೇಕು. ತಾತ್ಪರ್ಯವೆನೆಂದರೆ, ಸಮ್ಯಗ್ದೃಷ್ಟಿಯಾದ ಜೀವಿಯು ಕರ್ಮಗಳನ್ನು ಮಾಡುತ್ತಾನೆಂದು ಕಂಡುಬಂದರೂ ಆ ಜೀವಿಗೆ ಕರ್ಮಬಂಧವಾಗಲಾರದು. ಮೋಕ್ಷಾಭಿಲಾಷಿಯಾದವನು ಸಮಸ್ತ ರಾಗದ್ವೇಷಾದಿಗಳನ್ನೂ, ಅಹಂಕಾರ ಗರ್ವಾದಿಗಳನ್ನೂ ಪ್ರತಿ ಯೊಂದು ವಿಕಲ್ಪಗಳನ್ನೂ ದೂರೀಕರಿಸಿ,ಅಂದರೆ ತ್ಯಜಿಸಿ ಅಭೇದಜ್ಞಾನ ವಾದ ನಿಶ್ಚಯ ರತ್ನತ್ರಯಧಾರಿಯಾಗಿ ತನ್ನ ಶುದ್ಧಾತ್ಮ ಸ್ವಭಾವವನ್ನು ಸದಾ ಸ್ಮರಿಸುತ್ತಾ, ಚಿಂತಿಸುತ್ತಾ, ಅದರ ಆನಂದವನ್ನು ಅನುಭವಿ ಸುತ್ತಾ, ಇದ್ದರೆ ಮಾತ್ರ ಆ ನಿತ್ಯಾನಂದ ಸುಖಶಾಂತಿಮಯವಾದ ಮೋಕ್ಷ ಪ್ರಾಪ್ತಿಯಾದೀತಲ್ಲದೆ ಬೇರೆ ವಿಧಗಳಿಂದ ಆಗಲಾರದು.

ಮಿಥ್ಯಾದೃಷ್ಟಿಗಳಾದವರು ಮುನಿ (ದಿಗಂಬರ) ವೇಷ ತಾಳಿದ್ದರೂ ಕಠಿಣ ವ್ರತ-ನಿಯಮಗಳನ್ನು ಪಾಲಿಸುತ್ತಿದ್ದರೂ ಕೂಡಾ ಆತ್ಮಜ್ಞಾನದ ಪರಿಚಯವಾಗದೆ. ಆತ್ಮಧ್ಯಾನಾಭ್ಯಾಸ ಮಾಡದಿದ್ದರೆ, ಸಂಸಾರ ಬಂಧನ ದಿಂದ ಬಿಡುಗಡೆಯಾಗಲಾರದು, ಮತ್ತು ಮೋಕ್ಷಪ್ರಾಪ್ತಿಯೂ ದೊರಕ ಲಾರದು.

ಸುಜ್ಞಾನಿಗಳಾದವರು ಪುಣ್ಯ ಕರ್ಮದಿಂದ ದೊರಕಿದ ಉತ್ತ ಮೋತ್ತಮ ಸುಖಾನುಭವಗಳನ್ನು ಪಡೆದಿದ್ದರೂ ಅವುಗಳನ್ನು ವಿಷ ವೃಕ್ಷದ ಫಲಗಳೆಂದೇ ತಿಳಿದು ಅದರಲ್ಲಿ ತನ್ಮಯರಾಗದೆ, ಇವುಗಳು ವಿಕಲ್ಪಗಳೂ, ಅಸ್ಥಿರವೂ ಆಗಿರುವುದೆಂದು ಭಾವಿಸಿ, ನಿಶ್ಚಯಧ್ಯಾನದಿಂದ ಆತ್ಮಧ್ಯಾನದಲ್ಲಿಯೇ ತಲ್ಲೀನರಾಗಿ ಮೋಕ್ಷವೆಂಬ ನಿತ್ಯಸುಖಕ್ಕೆ ಭಾಗಿ ಯಾಗುತ್ತಾರೆ.

ಸುವಿಚಾರಿಗಳಾದ ಜೀವರು ಜಡ (ಪುದ್ಗಲ)ವೇ ಬೇರೆ, ಆತ್ಮನೇ ಬೇರೆ, ಶರೀರವು ನಾಶವಾಗುವಂತಹದ್ದು, ಆತ್ಮನಾದರೋ ಅವಿನಾಶಿ, ಪರಮಬ್ರಹ್ಮ ಜ್ಞಾನಸ್ವರೂಪನೂ, ಅಖಂಡನೂ, ಸರ್ವಜ್ಞನೂ, ಮತ್ತು

ನಿತ್ಯನೂ ಎಂದು ತಿಳಿದು, ಆತ್ಮಧ್ಯಾನದಲ್ಲಿಯೇ ಮಗ್ನರಾಗಿ, ವಸ್ತು ಸ್ವರೂಪಗಳನ್ನು ಚಿಂತಿಸಿ, ರಾಗಾದ್ವೇಷಾದಿಗಳನ್ನು ತೊರೆದು ತನ್ನಾತ್ಮನನ್ನು ಶುದ್ಧಗೊಳಿಸಿ ಮುಕ್ತರಾಗುವರು.

ಪ್ರತಿಯೊಂದು ಜೀವಿಗಳೂ ಸುಖವನ್ನೇ ಅಪೇಕ್ಷಿಸುತ್ತಿವೆಯಲ್ಲದೆ ದುಃಖವನ್ನು ಅಪೇಕ್ಷಿಸುವುದೇ ಇಲ್ಲ. ಆದರೆ ಆ ನಿಜಸುಖವನ್ನು ಹೊಂದುವ ದಾರಿಯನ್ನು ತಿಳಿಯದೆ ಬಾಯಾರಿಕೆ ನೀಗಲು ಉಪ್ಪು ನೀರು ಕುಡಿದು ದಾಹವನ್ನು ಹೆಚ್ಚಿಸಿಕೊಳ್ಳುವಂತೆ ದುಃಖಕ್ಕೆ ಕಾರಣವಾದ ರಾಗದ್ವೇಷಾದಿಗಳಿಗೆ ಬಲಿಯಾಗಿ ದುಃಖಕ್ಕೆ ತುತ್ತಾಗುವುದಲ್ಲದೆ ಎಂದಿಗೂ ನಿತ್ಯ ಸುಖಶಾಂತಿಗಳು ದೊರೆಯದೆ ಸಂಸಾರ ಚಕ್ರದಲ್ಲಿಯೇ ತಿರುಗುತ್ತಿರುವರು. ನಿಜವಾದ ಆನಂದ ಸುಖಗಳು ಪ್ರಾಪ್ತಿಯಾಗಬೇಕಾದರೆ, ರಾಗದ್ವೇಷಾದಿಗಳನ್ನು ತೊರೆದು ಆತ್ಮಧ್ಯಾನಾಭ್ಯಾಸದಲ್ಲಿಯೇ ಮಗ್ನರಾಗಿ, ಕರ್ಮಗಳಿಂದ ಬಿಡುಗಡೆಯಾದಾಗ ಆ ನಿಜವಾದ ಸುಖ ದೊರೆಯುತ್ತದೆ.

ಮೋಕ್ಷಾಪೇಕ್ಷಿ, ಪಂಚಾಸ್ತಿಕಾಯಗಳಾದ ಜೀವ, ಅಜೀವ (ಪುದ್ಗಲ) ಧರ್ಮ, ಅಧರ್ಮ, ಆಕಾಶಗಳೆಂಬುದನ್ನೂ, ಷಡ್ದ್ರವ್ಯಗಳಾದ ಜೀವ-ಅಜೀವ, ಧರ್ಮ-ಅಧರ್ಮ, ಆಕಾಶ- ಕಾಲಗಳೆಂಬುದನ್ನೂ, ಜೀವ-ಅಜೀವ-ಆಸ್ರವ-ಬಂಧ-ಸಂವರ-ನಿರ್ಜರ-ಮೋಕ್ಷಗಳೆಂಬ ಸಪ್ತ ತತ್ತ್ವಗಳನ್ನೂ, ಹಾಗೆಯೇ ಮೇಲಿನ ಸಪ್ತ ತತ್ತ್ವಗಳಿಗೆ ಪಾಪ-ಪುಣ್ಯಗಳೆಂಬ ಎರಡನ್ನು ಕೂಡಿಸಿದಾಗ ಆಗುವ ನವಪದಾರ್ಥಗಳನ್ನೂ, ಈ ಎಲ್ಲಾ ತತ್ತ್ವಗಳನ್ನು ಚಿಂತಿಸಿ, ಅವುಗಳ ನಿತ್ಯಾನಿತ್ಯತೆಯನ್ನು ಅರಿತು, ದೇಹವೇ ಬೇರೆ, ಆತ್ಮನ ಗುಣವೇ ಬೇರೆ ಎಂದು ದೃಢವಾಗಿ ನಂಬಿ, ಪಂಚೇಂದ್ರಿಯಗಳನ್ನು ಹಿಂದಿಟ್ಟು, ಅಂದರೆ ಹಿಡಿತದಲ್ಲಿರಿಸಿ, ರಾಗದ್ವೇಷಾದಿ ಕಷಾಯಗಳ ವಿಕಲ್ಪಗಳನ್ನು ತೊರೆದು, ಸದಾಕಾಲವೂ ತನ್ನ ಶುದ್ಧ ಆತ್ಮಚಿಂತನೆಯನ್ನು ಮಾಡುತ್ತಿದ್ದರೆ, ಈ ಜೀವನು ಚತುರ್ಗತಿ ರೂಪವಾದ ಸಂಸಾರಸಾಗರವನ್ನು ದಾಟಿ ನಿತ್ಯಾನಂದಮಯವಾದ ಮೋಕ್ಷಸುಖವನ್ನು ಹೊಂದುವನು...

## "ಆತ್ಮದರ್ಶನದ" ಕೆಲವು ಪದ್ಯಗಳು

(ಸುಲಲಿತ ಶಬ್ದಗಳಾದುದರಿಂದ ಅರ್ಥ ಬರೆಯಲಿಲ್ಲ)

ದಿನಕ್ಕೊಂದು ಗಳಿಗೆಯಾನುಂ। ಜಿನನಾಕಾರದೊಳು ತನ್ನ ನಿಜಮಂ ಕಾಣ್ಬಗೆ ॥ ಜನಿಸಿದ ಕರ್ಮಸಮೂಹಂ। ದಿನಕರನುದಯದೊಳ್ ಪರಿವ ಕತ್ತಲೆಗೆ ಸಮಂ ॥ ೧ ॥

ಶುದ್ಧ ಸ್ಫಟಿಕದ ಶಿಲೆಯೊಳ್ । ತಿದ್ದಿದ ಜಿನಬಿಂಬದಂತೆ ತನ್ನಂಗದೊಳುಂ ॥ ಶುದ್ಧಾತ್ಮನನ್ನು ಭಾವಿಸೆ। ಬದ್ಧಗಳಾಗಿರ್ದ ಕರ್ಮವಾಗಲೆ ಕೆಡುಗಂ ॥ ೨ ॥

ತನುಬೇರಾತ್ಮನು ಬೇರೆಂ। ದನವರತಂ ನಡೆವ ನುಡಿವ ಸಡಗರದೆಡೆಯೋಳ್ ॥ ಮನದೊಳ್ ಚಿಂತಿಸುವಾತನ। ಘನತರ ಕರ್ಮಗಳೆಲ್ಲ ನಿರ್ಜರೆಯಕ್ಕು ॥ ೩ ॥

ನಿನ್ನಾತ್ಮನ ನೀನರಿದುಂ। ನಿನ್ನಿಂದಂ ನಿನ್ನನೇ ಭಾವಿಸುತಿರಲುಂ ॥ ಮುನ್ನಿನ ಕರ್ಮ ಕೆಡುಗುಂ । ಸನ್ನುತ ಮಪವರ್ಗ ಮಕ್ಕುಮಿದು ಜಿನವಾಕ್ಯಂ ॥ ೪ ॥

ಭಾವದೊಳು ಪುಣ್ಯಬಂಧಂ । ಭಾವದೊಳುಂ ಪಾಪಕರ್ಮ ಬಂಧನಮಕ್ಕುಂ ॥ ಭಾವದೊಳುವೆಲ್ಲ ಕೈಗೂಡುಂ । "ಭಾವನೆ ಭವನಾಶಿನೀ"ಯೆಂಬುದಿದು ಜಿನವಾಕ್ಯಂ ॥ ೫ ॥

ತನ್ನಿಂದನ್ಯವತೊರೆದುಂ । ತನ್ನಿಂ ತಾನರಿತು ತನ್ನ ಹೃತ್ಸರಸಿಜದೊಳು ॥ ತನ್ನಾತ್ಮನ ಭಾವಿಸಲು ತನ್ನಿಂದಲೇ ಮುಕ್ತಿಯಕ್ಕುವುದು ಜಿನವಾಕ್ಯಂ ॥ ೬ ॥

# ಧ್ಯಾನ ಸ್ವರೂಪ

ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನೂ ಸುಖವನ್ನು ಬಯಸುತ್ತಾನಲ್ಲದೆ-ದುಃಖವನ್ನು ಯಾರೂ ಅಪೇಕ್ಷಿಸುವುದಿಲ್ಲ. ಆದರೆ ಆ ಸುಖ ಪ್ರಾಪ್ತಿಯಾಗುವ ಮಾರ್ಗ ಯಾವುದೆಂದು ವಿಚಾರಿಸುವವರು ಅತಿವಿರಳ. "ಜ್ಞಾನಮಾರ್ಗೇ ಸುಖಪ್ರಾಪ್ತಿ" ಎಂಬಂತೆ ಈ ಸುಖವು ಜ್ಞಾನದಿಂದುಂಟಾಗುತ್ತದೆ. ಇದರಲ್ಲಿ ಅಧ್ಯಾತ್ಮಜ್ಞಾನವೆಂತಲೂ, ಲೌಕಿಕಜ್ಞಾನವೆಂತಲೂ ಎರಡು ಭೇದಗಳಿವೆ. ತನ್ನ ಆತ್ಮನ ಚಿಂತನೆಯಿಂದ ಅಧ್ಯಾತ್ಮಜ್ಞಾನವೂ, ಲೌಕಿಕಪದಾರ್ಥಗಳಿಂದ ಲೌಕಿಕಜ್ಞಾನವೂ ಪ್ರಾಪ್ತಿಯಾಗುತ್ತದೆ...

ಈ ಸಂಸಾರದಲ್ಲಿ ಲೌಕಿಕಜ್ಞಾನದಿಂದಲೂ ಹಲವು ಪ್ರಯೋಜನಗಳಿವೆ. ಆದರೆ ಈ ಜ್ಞಾನವು ಅಧ್ಯಾತ್ಮಜ್ಞಾನದೊಡನೆ ಎಂದಿಗೂ ಸರಿಯಾಗಲಾರದು. ನಾವು ಲೌಕಿಕಜ್ಞಾನದಿಂದ ಒಂದೇ ಭವದಲ್ಲಿ ಕೀರ್ತಿ ಮೊದಲಾದೈಶ್ವರ್ಯಗಳನ್ನು ಹೊಂದಿ ಅಲ್ಪಸುಖಿಗಳಾಗಬಹುದು. ಈ ಅಧ್ಯಾತ್ಮಜ್ಞಾನದಿಂದಲಾದರೋ ಈ ಆತ್ಮನಿಗೆ ಭವಭವದಲ್ಲಿಯೂ ಸುಖ ಶಾಂತಿ ಉಂಟಾಗುವುದು...

ರಾಗ - ದ್ವೇಷ - ಮೋಹ - ಸ್ವಾರ್ಥಪರತೆ ಹಾಗೂ ಕ್ರೋಧಾದಿ ಕಷಾಯಗಳು ನಮ್ಮ ಆತ್ಮನ ಯಥಾರ್ಥವಾದ ಸುಖವನ್ನು ನಾಶಮಾಡ ತಕ್ಕವುಗಳಾಗಿವೆ. ಈ ರಾಗದ್ವೇಷಾದಿಗಳು ಶಾಂತವಾಗುವುದರಿಂದ ನಮ್ಮ ಆತ್ಮನಿಗೆ ಸುಖ-ಶಾಂತಿ ಪ್ರಾಪ್ತಿಯಾಗುತ್ತದೆ. ಆದರೆ ಲೌಕಿಕ ಜ್ಞಾನವು ನಿರರ್ಥಕವೆಂದು ಎಂದಿಗೂ ತಿಳಿಯಬಾರದು. ನಾವು ಲೋಕ ವ್ಯವಹಾರದಲ್ಲಿಯೇ ಮಗ್ನರಾಗದೆ ಚಿದಾನಂದಮಯನಾದ ನಮ್ಮ ಆತ್ಮ ಧ್ಯಾನದಕಡೆಗೂ ಲಕ್ಷ್ಯಕೊಡಬೇಕು.

"ಧ್ಯಾನ"ವೆಂದರೆ ಚಿಂತಿಸುವುದು ಎಂದು ಅರ್ಥ. ಅಂದರೆ ತನಗೆ ಇಷ್ಟವಾದ ಪುಷ್ಪತಾಂಬೂಲ-ಸ್ತ್ರೀ ಮೊದಲಾದುವುಗಳಲ್ಲಿ ಮತ್ತು ತನಗಿಷ್ಟವಿಲ್ಲದ ವಿಷ-ಕಂಟಕ ವಸ್ತುಗಳಲ್ಲಿಯೂ ರಾಗ(ಪ್ರೀತಿ)ದ್ವೇಷಗಳನ್ನು ಬಿಟ್ಟು ರಾಗದ್ವೇಷಾದಿ ವಿಕಲ್ಪದಿಂದ ರಹಿತನಾದ ಹಾಗೂ ಪರಮಾನಂದ ಮಯನಾದ ನಿಜಪರಮಾತ್ಮನನ್ನು ಭಾವಿಸುವುದೇ ಧ್ಯಾನವು. ಅಥವಾ

ಶುಭಾಶುಭ ಪರಿಣಾಮಗಳಲ್ಲಿ ಓಡಿಸುತ್ತಿರುವ ಮನಸ್ಸನ್ನು ಒಂದೇ ವಸ್ತುವಿನಲ್ಲಿ ಸ್ಥಿರಗೊಳಿಸುವುದೇ ಧ್ಯಾನವು. ಇದಕ್ಕೆ "ಉಪಯೋಗ" ಎಂದೂ ಹೇಳುತ್ತಾರೆ. "ದರ್ಶನ" ಎಂದೂ ಹೇಳುತ್ತಾರೆ. ಇದೇ ಆತ್ಮದರ್ಶನ.

ಈ ಉಪಯೋಗಗಳಲ್ಲಿ "ಅಶುಭೋಪಯೋಗ" ಮತ್ತು "ಶುಭೋಪಯೋಗ" ಹಾಗೂ "ಶುದ್ಧೋಪಯೋಗ" ಎಂದು ಮೂರು ವಿಧವಾಗಿದೆ. ನಮ್ಮ ಆತ್ಮನಿಗೆ ಪಾಪಸಂಬಂಧವನ್ನು ಉಂಟುಮಾಡುವ ಕೊಲೆ, ಹುಸಿ, ಕಳವು, ಕುಶೀಲ, ಅತಿಕಾಂಕ್ಷೆ ಮೊದಲಾದ ವ್ಯಾಪಾರಗಳಲ್ಲಿ ಮನ-ವಚನ-ಕಾಯಗಳಿಂದ ಪ್ರವರ್ತಿಸುವುದೇ "ಅಶುಭೋಪಯೋಗ" ಇದು ದುರ್ಧ್ಯಾನವೆನಿಸುತ್ತದೆ. ಇದರಿಂದ ಆತ್ಮನಿಗೆ ಅಧಿಕವಾದ ಪಾಪಸಂಬಂಧವಾಗಿ ಇಹಪರಗಳಲ್ಲಿ ದುಃಖಿಯಾಗುವನು. ಆದುದರಿಂದ ಈ ಅಶುಭೋಪಯೋಗವು ತ್ಯಾಜ್ಯವಾಗಿದೆ.

ಆತ್ಮನಿಗೆ ಪುಣ್ಯವನ್ನುಂಟುಮಾಡುವ, ಉತ್ತಮ ಪದವಿಯನ್ನು ಹೊಂದಿಸುವ ಮತ್ತು ಕರ್ಮವಿಮೋಚನೆಯನ್ನು ಮಾಡುವ ಉಪಯೋಗವೇ "ಶುಭೋಪಯೋಗ" ಎಂದಾಗುವುದು. ಇದು ಆತ್ಮನಿಗೆ ಪರಂಪರೆಯಿಂದ ಮೋಕ್ಷಕ್ಕೆ ಕಾರಣವಾದುದರಿಂದ ಸ್ವೀಕರಿಸುವುದಕ್ಕೆ ಯೋಗ್ಯವಾಗಿದೆ. ಉತ್ತಮವಾದ ಭಕ್ತಿಯಿಂದ ದೇವಪೂಜೆ-ಶಾಸ್ತ್ರಸ್ವಾಧ್ಯಾಯ, ಧರ್ಮೋಪದೇಶ ಮೊದಲಾದ ಕಾರ್ಯಗಳಿಂದ ಶುಭೋಪಯೋಗಕ್ಕೆ ಕಾರಣವಾಗಿದೆ...

ನಾನು (ಆತ್ಮನು) ಇಂದ್ರಿಯ, ಶರೀರ, ಪುತ್ರ, ಮಿತ್ರ, ಕಳತ್ರಾದಿ ಬಾಹ್ಯಸಂಪತ್ತುಗಳಿಂದ ಬೇರೆಯಾಗಿರುವವನು. ನಾನು ಜ್ಞಾನದರ್ಶನಮಯನು, ನಾನು ಶತ್ರು, ಮಿತ್ರ, ಜನನ-ಮರಣಾದಿಗಳಿಂದ ರಹಿತನಾದವನು, ಇವೆಲ್ಲಾ ಕರ್ಮಜನಿತವಾದವುಗಳು. ನಾನು ಶುದ್ಧಚಿದ್ರೂಪನು ಎಂಬುದಾಗಿ ತನ್ನ ಆತ್ಮನನ್ನೇ ಧ್ಯಾನಿಸಿ ಭಾವಿಸುವುದೇ "ಶುದ್ಧೋಪಯೋಗ" ಎಂದಾಗುವುದು. ಇದು ಪರಮಾನಂದಮಯವಾದುದರಿಂದಲೂ ಸಾಕ್ಷಾತ್ಮೋಕ್ಷಕ್ಕೆ ಕಾರಣವಾದ್ದರಿಂದಲೂ ಸ್ವೀಕರಿಸಲು ಯೋಗ್ಯವಾಗಿದೆ.

ಈ ಶುದ್ಧೋಪಯೋಗದ ಮೂಲಕ ಯಥಾರ್ಥವಾದ ತನ್ನಾತ್ಮ ಸ್ವರೂಪದಲ್ಲಿಯೇ ಶ್ರದ್ಧೆ, ಜ್ಞಾನ, ಮತ್ತು ಆಚರಣೆಗಳಿಂದ ಯುಕ್ತರಾಗಿ, ಧ್ಯಾನಿಸಿದರೆ ಅನಾದಿಕಾಲದಿಂಡ ಈ ಆತ್ಮನಿಗೆ ಅಂಟಿಕೊಂಡು ಬಂದಿರುವ ಕರ್ಮಗಳು ನಾಶ (ಬಿಡುಗಡೆ) ಆಗಿ ಉತ್ತಮೋತ್ತಮ ಸುಖ ಪ್ರಾಪ್ತಿ ಯಾಗುವುದು...

ಹತಂಜ್ಞಾನಂ ಕ್ರಿಯಾಶೂನ್ಯಂ । ಹತಾಚಾಜ್ಞಾನಿನಃ ಕ್ರಿಯಾಃ ॥
ಧಾವನ್ನಪ್ಯಂಧಕೋ ನಷ್ಟಃ। ಪಶ್ಯನ್ನಪಿಚ ಪಂಗುಕಃ ॥

ಇದರ ತಾತ್ಪರ್ಯವೇನೆಂದರೆ:- ಬೆಂಕಿಯಿಂದ ಉರಿಯುತ್ತಿರುವ ಅರಣ್ಯದ ಮಧ್ಯದಲ್ಲಿ ಅಲ್ಲಿ ಇಲ್ಲಿ ಓಡಾಡುತ್ತಿರುವ ಕುರುಡನು, ನಾಲ್ಕು ದಿಕ್ಕಿನಲ್ಲಿಯೂ ಬೆಂಕಿಯು ಆವರಿಸುತ್ತಿರಲು ಆತನು ದೃಷ್ಟಿರಹಿತನಾದ ಕಾರಣ ಬೆಂಕಿಯಲ್ಲಿಯೇ ಬಿದ್ದು ನಾಶನಾಗುವನು. ಹಾಗೆಯೇ ಕುಂಟನು ಕೂಡಾ ಇಲ್ಲಿ ಬೆಂಕಿ ಇದೆ, ಇಲ್ಲಿ ರಸ್ತೆಯಿದೆ ಎಂದು ತಿಳಿದಿದ್ದರೂ ಓಡಿ ಹೋಗಲು ಕುಂಟನಾದ್ದರಿಂದ ಅಂದರೆ ಕಾಲುಗಳು ಇಲ್ಲದಿರುವ ಕಾರಣ ಆತನೂ ಆ ಅಗ್ನಿಯಲ್ಲಿಯೇ ಬಿದ್ದು ಸಾಯುವನು..

ಇದರಂತೆಯೇ ಕೇವಲ ಆತ್ಮಜ್ಞಾನದ ಪರಿಚಯವಿದ್ದರೆ ಮಾತ್ರ ಸಾಲದು. ಪ್ರಯೋಜನಕ್ಕೂ ಬಾರದು. ಇದಕ್ಕಾಗಿ ಪ್ರತಿದಿನವೂ ಒಂದು ಕ್ಷಣವಾದರೂ ಏಕಾಂತಸ್ಥಾನದಲ್ಲಿದ್ದು ನಾಸಿಕಾಗ್ರದ ಮೇಲೆ ದೃಷ್ಟಿ ಯನ್ನಿಟ್ಟು ದೃಢವಾದ ವಿಶ್ವಾಸದಿಂದ ತನ್ನ ಆತ್ಮಸ್ವರೂಪವನ್ನು ಧ್ಯಾನಿಸ ಬೇಕು. ಇದರಲ್ಲಿ ಯಥಾರ್ಥವಾದ ಜ್ಞಾನವಿಲ್ಲದೆ ಅಜ್ಞಾನಿ (ಮಿಥ್ಯಾ) ತಪಸ್ವಿಗಳಂತೆ ಧ್ಯಾನಿಸಿದರೂ ಪ್ರಯೋಜನವಿಲ್ಲ. ಆದ್ದರಿಂದ ಯಥಾರ್ಥ ವಾದ ಆತ್ಮನ ನಂಬಿಕೆ, ಜ್ಞಾನ ಮತ್ತು ಆಚರಣೆ ಇವುಗಳಿಂದ ಉತ್ತ ಮೋತ್ತಮವಾದ ನಿತ್ಯಾನಂದಮಯವಾದ ಸುಖವು ಪ್ರಾಪ್ತಿಯಾಗುತ್ತದೆ. ಈ ಅಭ್ಯಾಸ ಮತ್ತು ದೃಢತೆಯು ಒಂದೇ ಬಾರಿಗೆ ಆಗದಿದ್ದರೂ ಪ್ರತಿ ನಿತ್ಯದ ಅಭ್ಯಾಸದಿಂದ ಮುಂದಕ್ಕೆ ಸುಲಭಸಾಧ್ಯವಾಗುತ್ತದೆ...

ಕ್ರಮತಃ ಕ್ರಮತೋಯಾತಿ । ಕೀಟಕಾ ಶುಕವತ್ಪಲಂ ॥
ನಗಸ್ಥಂ ಸ್ವಸ್ಥಿತರಿ ನಾಚ । ಶುದ್ಧ ಚಿದ್ರೂಪ ಚಿಂತನಂ ॥

ಕ್ರಿಮಿಯು ಗಿಳಿಯಂತೆ ಒಂದೇ ಸಾರಿ ಫಲದ ಸಮೀಪಕ್ಕೆ ಹಾರಿ ಬಂದು ಫಲವನ್ನು ತಿನ್ನಲಾರದು. ಆದರೆ ಪ್ರಯತ್ನಪಡುತ್ತಾ ಕ್ರಮೇಣ ಭೂಮಿಯಿಂದ ಮರದ ಬುಡಕ್ಕೆ ಬಂದು ಮೆಲ್ಲಮೆಲ್ಲನೆ ಏರುತ್ತಾ ಫಲದ ಸಮೀಪವನ್ನು ಹೊಂದಿದ ನಂತರ ಫಲದ ರಸಾ ಸ್ವಾದನೆಯನ್ನು ಹೇಗೆ ಮಾಡುವುದೋ ಅದೇ ಪ್ರಕಾರ ಈ ಶುದ್ಧಚಿದ್ರೂಪ ಆತ್ಮನ ಧ್ಯಾನವು ಒಂದೇ ಬಾರಿಗೆ ಸಾಧ್ಯವಾಗಲಾರದು. ಸದಾ ಪ್ರಯತ್ನಮಾಡುತ್ತಿದ್ದು ಕ್ರಮೇಣ ಪುತ್ರ, ಮಿತ್ರ, ಕಳತ್ರಾದಿಗಳ ಮಮತೆಯನ್ನು ಬಿಟ್ಟು ಆತ್ಮನನ್ನು ಚಿಂತಿಸುತ್ತಾ ಇದ್ದರೆ ಧ್ಯಾನವು ಸುಲಭಸಾಧ್ಯವಾಗುತ್ತದೆ...

ಈ ಅಭ್ಯಾಸವನ್ನು ಬಾಲಕನೂ, ತರುಣನೂ, ವೃದ್ಧನೂ, ಧನಿಕನೂ, ಬಡವನೂ, ಶಕ್ತನೂ, ಅಶಕ್ತನೂ, ರೋಗಿ, ನಿರೋಗಿಯೂ ಎಲ್ಲರೂ ಪ್ರತಿಯೊಂದು ಅವಸ್ಥೆಯಲ್ಲಿಯೂ ಮಾಡಬಹುದು. ಅಲ್ಲದೆ ಈ ಅಭ್ಯಾಸವು ಮುನಿಗಳಿಗೆ ಮಾತ್ರ ಸಾಧ್ಯ. ಗೃಹಸ್ಥರಾದ ನಮಗೆ ಸಾಧ್ಯವಲ್ಲವೆಂದು ತಿರಸ್ಕರಿಸದೆ ಉದಾಶೀನ ತಾಳದೆ ಅಭ್ಯಾಸಮಾಡಬೇಕು..

ಇದಕ್ಕಾಗಿ ಪ್ರತಿಯೊಂದು ಜೀವಿಗಳ ಮೇಲೆ ಮಿತ್ರತ್ವ-ವ-ದಯಾ ಭಾವವನ್ನಿಡುವುದರಿಂದ ಈ ಆತ್ಮನಿಗೆ ಶುದ್ಧಾತ್ಮಧ್ಯಾನವು ಸಿದ್ಧಿಯಾಗುತ್ತದೆ. ಕೊನೆಗೆ ಸಂಸಾರ ಪರಿಭ್ರಮಣೆಯು ನಾಶವಾಗಿ ಮೋಕ್ಷ ಪ್ರಾಪ್ತಿಯಾಗುತ್ತದೆ...

## ಚಿತ್ತದ ಏಕಾಗ್ರತೆ

ಧ್ಯಾನಯೋಗದಲ್ಲಿ ಮುಖ್ಯ ವಿಷಯ ಮೂರು, (1) ಚಿತ್ತದ ಏಕಾಗ್ರತೆ, (2) ಚಿತ್ತದ ಏಕಾಗ್ರತೆಗೆ ಉಪಯುಕ್ತವಾದ ಬಾಳಿನ ಪರಿಮಿತತನ, (3) ಸಾಮ್ಯದೆಶೆ ಅಥವಾ ಸಮ್ಯಗ್ದೃಷ್ಟಿ ಈ ಮೂರು ವಸ್ತುಗಳಿಲ್ಲದಿದ್ದರೆ ನಿಜವಾದ ಸಾಧನೆಯಾಗಲಾರದು...

ಚಿತ್ತದ ಏಕಾಗ್ರತೆ ಎಂದರೆ ಮನಸ್ಸಿನ ಚಂಚಲತೆಗೆ ಅಂಕುಶ. ಜೀವನದ ಪರಿಮಿತತನವೆಂದರೆ ಎಲ್ಲಾ ಕ್ರಿಯೆಯನ್ನೂ ತೂಕಮಾಡಿ

ಮಾಡುವುದು. ಸಮದೃಷ್ಟಿಯೆಂದರೆ ವಿಶ್ವದ ಬಗ್ಗೆ ಉದಾರದೃಷ್ಟಿ, ಈ ಮೂರು ವಸ್ತುಗಳಿಂದ ಧ್ಯಾನಯೋಗ ಸಿದ್ಧಿಯಾಗುತ್ತದೆ. ಈ ಮೂರು ಸಾಧನೆಗಳಿಗೂ ಸಾಧನಗಳುಂಟು. ಅಭ್ಯಾಸ ಮತ್ತು ವೈರಾಗ್ಯ ಕೂಡ ಬೇಕು. ಈ ಐದು ವಿಷಯುಗಳು ಒಟ್ಟಾಗಿ ಸೇರಬೇಕು..

ಮೊದಲು ಮನಸ್ಸಿನ ಏಕಾಗ್ರತೆ. ಪ್ರತಿಯೊಂದು ಕೆಲಸಕ್ಕೂ ಇದು ಅಗತ್ಯ. ವ್ಯಾವಹಾರಿಕ ವಿಷಯುಗಳಿಗೂ ಇದು ಬೇಕೇಬೇಕು. ವ್ಯವ ಹಾರಕ್ಕೆ ಬೇಕಾದ ಗುಣ ಬೇರೆ, ಪರಮಾರ್ಥಕ್ಕೆ ಬೇರೆ ಗುಣ ಎಂದಿಲ್ಲ. ವ್ಯವಹಾರವನ್ನು ಶುದ್ಧಗೊಳಿಸುವುದೆಂದರೇನೇ ಪರಮಾರ್ಥ. ವ್ಯವ ಹಾರ ಯಾವುದಿದ್ದರೂ ಅದರ ಸೋಲು-ಗೆಲುವು ನಮ್ಮ ಏಕಾಗ್ರತೆ ಯನ್ನೇ ಅವಲಂಬಿಸಿದೆ.

ವ್ಯಾಪಾರ, ವ್ಯವಹಾರ, ಶಾಸ್ತ್ರಶೋಧನೆ, ರಾಜಕೀಯ, ಮುತ್ಸದ್ದಿ ತನ, ಯಾವುದಾಗಿದ್ದರೂ ಅದರಲ್ಲಿ ಯಶಸ್ಸು ಸಿಗಬೇಕಾದರೆ ಆಯಾಯ ಮನುಷ್ಯನ ಏಕಾಗ್ರತೆಯೇ ಅದಕ್ಕೆ ಕಾರಣ...

ವ್ಯವಹಾರವಿರಲಿ, ಪರಮಾರ್ಥವಿರಲಿ, ಚಿತ್ತದ ಏಕಾಗ್ರತೆಯಿಲ್ಲದೆ, ಇದರಲ್ಲಿ ಯಶಸ್ಸು ಸಿಕ್ಕುವುದು ಕಠಿಣ. ಚಿತ್ತವು ಏಕಾಗ್ರವಾದರೆ ಎಂದಿಗೂ ಸಾಮರ್ಥ್ಯ ಕಡಿಮೆಯಾಗಲಾರದು. ಒಬ್ಬನಿಗೆ ಅರುವತ್ತು ವರ್ಷ ವಯಸ್ಸಾಗಿದ್ದರೂ ಕೂಡಾ, ಆತನಲ್ಲಿ ಯೌವನದ ಉತ್ಸಾಹ-ಶಕ್ತಿ ಕಂಡುಬಂದೀತು. ವಯಸ್ಸಾದ ಹಾಗೆಲ್ಲಾ ಮನುಷ್ಯನ ಮನಸ್ಸು ಗಟ್ಟಿ ಯಾಗುತ್ತಾ ಹೋಗಬೇಕು. ಒಂದು ಹಣ್ಣನ್ನು ನೋಡಿ. ಅದು ಕಾಯಿ ಆಗಿ ಪಕ್ವವಾಗಿ ಕೊನೆಗೆ ಕೊಳೆಯುತ್ತದೆ. ಮತ್ತು ನಾಶಹೊಂದುತ್ತದೆ. ಆದರೂ ಅದರೊಳಗಿನ ಬೀಜ ಮಾತ್ರ ಗಟ್ಟಿಯಾಗಿಯೇ ಉಳಿಯುತ್ತದೆ. ಹೊರಗಿನ ಶರೀರ ಒಣಗಬಹುದು, ಮತ್ತು ಬೀಳಬಹುದು. ಆದರೆ ಆ ಕಾಯಿಯ ಸಾರ ಸರ್ವಸ್ವವಲ್ಲ. ಅದರ ಆತ್ಮವೆಂದರೆ ಬೀಜ, ಶರೀರದ ವಿಷಯುವೂ ಹೀಗೇ. ಶರೀರಕ್ಕೆ ಪ್ರಾಯ ಹೆಚ್ಚಾದರೂ ಸ್ಮರಣ ಶಕ್ತಿ ಹೆಚ್ಚುತ್ತಿರಬೇಕು. ಬುದ್ಧಿ ತೇಜಸ್ವಿಯಾಗಿರಬೇಕು. ಆತ್ಮ ಬಲಶಾಲಿ ಯಾಗಬೇಕು. ಇದಕ್ಕಾಗಿ ಏಕಾಗ್ರತೆ ಬೇಕು...

ಚಿತ್ತದ ಏಕಾಗ್ರತೆ ಸಾಧಿಸುವುದೆಂದರೆ ಸುಲಭವೇನಲ್ಲ. ಮನಸ್ಸನ್ನು ಹತೋಟಿಯಲ್ಲಿಡುವುದು ಮಹತ್ವದ ಕೆಲಸವಾಗಿದೆ. ವಿಚಾರ ಚಕ್ರಗಳನ್ನು ಬಲವಾಗಿ ನಿಲ್ಲಿಸದೆ ಇದ್ದರೆ ಏಕಾಗ್ರತೆ ಎಲ್ಲಿಯದು? ಹೊರಗಿನ ಚಕ್ರಗಳನ್ನು ಹೇಗಾದರೂ ನಿಲ್ಲಿಸಬಹುದು. ಹೊರಗಿನ ಚಕ್ರ ತಿರುಗುತ್ತಲೇ ಇರುತ್ತದೆ. ಚಿತ್ತದ ಏಕಾಗ್ರತೆಗೆ ಬಾಹ್ಯಸಾಧನೆಗಳನ್ನು ಮಾಡಿದಂತೆಲ್ಲ ಈ ಒಳಗಿನ ಚಕ್ರವು ಹೆಚ್ಚು ಹೆಚ್ಚು ವೇಗದಿಂದ ತಿರುಗಲಾರಂಭಿಸುತ್ತದೆ. ಆಸನ ಹಾಕಿ, ಕಣ್ಣ ಸ್ಥಿರವಾಗಿರಿಸಿ ಕುಳಿತುಕೊಳ್ಳಬಹುದು. ಇವುಗಳಿಂದ ಮನಸ್ಸನ್ನು ಏಕಾಗ್ರತೆಗೊಳಿಸಲು ಸಾಧ್ಯವಾಗಲಾರದು. ಇದಕ್ಕೆ ಮನಸ್ಸಿನೊಳಗಿನ ಚಕ್ರಗಳನ್ನು ನಿಲ್ಲಿಸಲು ಸಾಧಿಸಬೇಕು. ಏಕಾಗ್ರತೆಯಲ್ಲಿ ಇದು ಮುಖ್ಯ ವಿಚಾರ...

ಹೊರಗಿನ ಅಪಾರ ಸಂಸಾರ ಮನಸ್ಸಿನಲ್ಲಿ ತುಂಬಿರುತ್ತದೆ. ಅದನ್ನು ನಿಲ್ಲಿಸದ ಹೊರತು ಏಕಾಗ್ರತೆ ಅಸಾಧ್ಯ. ನಾವು ನಮ್ಮ ಆತ್ಮನ ಅಪಾರ ಜ್ಞಾನಶಕ್ತಿಯನ್ನು ಹೊರಗಿನ ಕ್ಷುದ್ರ ವಸ್ತುಗಳಿಗಾಗಿ ಹಾಳು ಮಾಡುತ್ತೇವೆ. ಅದು ಕೂಡದು. ಯಾರನ್ನೂ ಮೋಸವಂಚನೆಗೊಳಿಸದೆ ಸ್ವಂತ ಕಷ್ಟದಿಂದ ಹಣ ಸಂಪಾದಿಸಿದ ಶ್ರೀಮಂತ ಮನುಷ್ಯನು, ಹೇಗೆ ಅತಿವ್ಯಯ ಮಾಡಲಾರನೋ ಹಾಗೆಯೇ, ನಾವು ಕೂಡಾ ನಮ್ಮ ಆತ್ಮದ ಜ್ಞಾನಶಕ್ತಿಯನ್ನು ಕ್ಷುದ್ರವಸ್ತುಗಳ ಚಿಂತನೆಯಲ್ಲಿ ಹಾಳುಮಾಡಬಾರದು. ನಮ್ಮ ಪಾಲಿನ ಅಮೂಲ್ಯನಿಧಿ ಎಂದರೆ ಜ್ಞಾನಶಕ್ತಿಯಾಗಿದೆ. ಅಂಥಾ ಶಕ್ತಿಯನ್ನು ಸ್ಥೂಲವಿಚಾರಗಳಿಗಾಗಿ ನಾವು ಹಾಳುಮಾಡುತ್ತೇವೆ...

ಇಂಥಾ ಭಯಾನಕವಾದ ಸಂಸಾರ ನಮ್ಮ ಸುತ್ತಮುತ್ತ ಹಗಲಿರುಳೂ, ಒಳಗೂ, ಹೊರಗೂ ತಿರುಗುತ್ತಿದೆ. ಪ್ರಾರ್ಥನೆ, ಭಜನೆಗಳಲ್ಲಿಯೂ ಸಹ ನಮ್ಮ ಉದ್ದೇಶ ಹೊರಗಿನವೇ ಆಗಿರುತ್ತದೆ. ಪರಮಾತ್ಮನೊಂದಿಗೆ ತನ್ಮಯನಾಗಿ ಒಂದುಕ್ಷಣವಾದರೂ ಸಂಸಾರವನ್ನು ಮರೆಯೋಣ ಎಂಬ ಭಾವನೆ ನಮ್ಮಲ್ಲಿ ಶೂನ್ಯವಾಗಿದೆ. ಪ್ರಾರ್ಥನೆಯು ಕೂಡಾ ಒಂದು ಪ್ರದರ್ಶನ ಎನ್ನುವಂತಾಗಿದೆ, ನಮ್ಮ ಮನಸ್ಥಿತಿ. ಹೀಗಿರುವಾಗ ಆಸನ ಹಾಕಿದರೇನು? ಕಣ್ಣು ಮುಚ್ಚಿದರೇನು? ಎಲ್ಲವೂ

ವ್ಯರ್ಥ. ನಮ್ಮ ಮನಸ್ಸಿನ ಓಟ ಸದಾ ಹೊರಗೆ ಹರಿಯುತ್ತಿದ್ದರೆ ನಮ್ಮ ಶಕ್ತಿಯೆಲ್ಲ ನಷ್ಟವಾಗುತ್ತದೆ. ಈ ವಿಷಯಗಳೇ ಈಗ ನಮ್ಮ ದೇಶದಲ್ಲಿ ಪದೇ ಪದೇ ಅನುಭವವಾಗುತ್ತದೆ. ತೀರ ಸಣ್ಣ-ಪುಟ್ಟ ವಿಷಯಗಳಲ್ಲಿ ನಾವು ತೋರಿಸುವ ಆಸಕ್ತಿಯನ್ನು ನೋಡಿದರೆ ವಿಷಾದ ವಾಗುತ್ತದೆ. ಇದಕ್ಕೆ ಮನದ ನಿಲುವು ಶುದ್ಧವಾಗಿರಬೇಕು. ಬರೀ ಆಸನ ಹಾಕಿದರೆ ಸಾಲದು. ವ್ಯವಹಾರವೆಲ್ಲವೂ ಶುದ್ಧವಾಗಿರಬೇಕಾ ದುದು ಅಗತ್ಯ. ವ್ಯವಹಾರ ಶುದ್ಧವಾಗಬೇಕಾದರೆ ಅದರ ಉದ್ದೇಶ ಬದಲಾಗಬೇಕು. ವೈಯಕ್ತಿಕ ಲಾಭ, ವಾಸನಾತೃಪ್ತಿ, ಮೊದಲಾದ ಬಾಹ್ಯ ವಿಷಯಗಳಿಗಾಗಿ ವ್ಯವಹಾರ ಮಾಡಬಾರದು.

ಏಕಾಗ್ರತೆಗೆ ಇಂಥಾ ಜೀವನಶುದ್ಧಿ ಅಗತ್ಯ. ಬಾಹ್ಯವಸ್ತುಗಳ ಯೋಚನೆ ನಿಲ್ಲಬೇಕು. ಮಾನವನ ಆಯುಸ್ಸೇನೂ ಹೆಚ್ಚಿಲ್ಲ. ಆದರೆ ಈ ಅಲ್ಪ ಆಯುಸ್ಸಿನಲ್ಲಿಯೂ ಸಹ ನಿತ್ಯಾನಂದ ಸುಖವನ್ನನುಭವಿಸುವ ಸಾಮರ್ಥ್ಯ ಮಾನವನಿಗಿದೆ. ನರನಿಂದ ನಾರಾಯಣನಾಗಬಹುದು. ಹಾಗೆಯೇ ನರನು ವಾನರನಾಗಲೂಬಹುದು. ಹಿಂದೆ ಅನೇಕ ಮಹಾ ಪುರುಷರು ಬಾಳಿಹೋದರು. ಈಗಲೂ ಕೆಲವರು ಇರುವರು. ಇದು ಅನುಭವದ ಮಾತು.

ಈ ಚಿತ್ತದ ಏಕಾಗ್ರತೆಗೆ ಸಹಾಯವಾಗುವ ಎರಡನೆಯ ವಿಷಯ ವೆಂದರೆ ನಮ್ಮ ಬಾಳಿನಲ್ಲಿ ಪರಿಮಿತಿತನಬೇಕು. ಜೀವನ ಮಿತಿಯಲ್ಲಿರ ಬೇಕು. ಎಲ್ಲೆಲ್ಲೂ ಎಣಿಕೆ, ಅಳತೆ, ಮತ್ತು ಪ್ರತಿಯೊಂದು ಇಂದ್ರಿಯ ಗಳ ಮೇಲೂ ಕಾವಲು-ರಕ್ಷೆ ಇಡಬೇಕು. ಮಿತಿಮೀರಿ ತಿನ್ನುತ್ತಿಲ್ಲವಷ್ಟೆ? ವಿಪರೀತದೃಷ್ಟಿ ಸುತ್ತಿಲ್ಲವಷ್ಟೆ? ಅತಿನಿದ್ರೆ ಮಾಡುತ್ತಿಲ್ಲವಷ್ಟೆ? ಎಂದು ಯಾವಾಗಲೂ ಸೂಕ್ಷ್ಮವಾಗಿ ತನ್ನನ್ನು ತಾನೇ ಪರೀಕ್ಷಿಸುತ್ತಿರಬೇಕು...

ಇದಕ್ಕಾಗಿ ಬಾಳಿನಲ್ಲಿ ಪರಿಮಿತಬೇಕು. ಕೆಟ್ಟವಸ್ತು ನೋಡ ಬಾರದು. ಕೆಟ್ಟಪುಸ್ತಕ ಓದಬಾರದು. ನಿಂದೆ-ಸ್ತುತಿಗಳಿಗೆ ಕಿವಿಗೊಡ ಬಾರದು. ದೋಷ, ಪೂರ್ಣವಸ್ತು ಬೇಡವೇಬೇಡ. ಫಲಾಹಾರವೆಂದರೆ ಶುದ್ಧ ಆಹಾರವಾಗಿರಬೇಕು. ಅದೂ ಅಳತೆಗೆಡಬಾರದು. ನಾಲಗೆಯ

ಸ್ವಚ್ಛಂದವೃತ್ತಿಯನ್ನು ತಡೆಯಬೇಕು. ಒಟ್ಟಾರೆ ಬಾಳಿನಲ್ಲಿ ಪರಿಮಿತ ತನವೆಂದರೆ "ನಿಯಮಿತ ಆಚರಣೆ" ಅತೀ ಅಗತ್ಯ...

ಪ್ರತಿದಿನ ವಿಚಾರಿಸುತ್ತಿರಬೇಕು. ನಾನು ನನ್ನನ್ನು ಉದ್ಧರಿಸಿ ಕೊಳ್ಳಬೇಕಾಗಿದೆ. ನನಗೆ ಮುಂದೆ ಹೋಗಬೇಕು. ಮೇಲಕ್ಕೆ ನೆಗೆಯ ಬೇಕು. ಈ ನರದೇಹದಲ್ಲಿ ನಾನು ಹೀಗೆಯೇ ಬಿದ್ದಿರಲಾರೆ. ಬದ್ಧಾತ್ಮ ನಾದ ನಾನು ಶುದ್ಧಾತ್ಮ(ಪರಮಾತ್ಮ)ನಾಗಲು ಧೈರ್ಯದಿಂದ ಪ್ರಯತ್ನ ಪಡುತ್ತೇನೆ. ಇತ್ಯಾದಿಗಳಲ್ಲಿ ದೃಢಸಂಕಲ್ಪವಿಡಬೇಕು. ಧ್ಯಾನಯೋಗಕ್ಕೆ ಚಿತ್ತದ ಏಕಾಗ್ರತೆ, ಬಾಳಿನ ಪರಿಮಿತಿತನ, ಸಾಮ್ಯದೃಷ್ಟಿ ಇವು ಮೂರು ಅತಿ ಅಗತ್ಯ... ಇನ್ನೂ ಎರಡು ಸಾಧನೆಗಳುಂಟು. ಒಂದು ವೈರಾಗ್ಯ. ಇನ್ನೊಂದು ಅಭ್ಯಾಸ, ಒಂದು ವಿಧ್ವಂಸಕ, ಇನ್ನೊಂದು ವಿಧಾಯಕ. ಹೊಲದಲ್ಲಿರುವ ಹುಲ್ಲು ಕ್ಕೊಯ್ದು ಬಿಸಾಡುವುದು ವಿಧ್ವಂಸಕ ಕೆಲಸ. ಇದಕ್ಕೇನೇ ವೈರಾಗ್ಯವೆನ್ನುವುದು. ಇನ್ನೊಂದು ಹೊಲದಲ್ಲಿ ಬಿತ್ತುವುದು ವಿಧಾಯಕ ಕೆಲಸ.

ಮನಸ್ಸಿನಲ್ಲಿ ಸದ್ವಿಚಾರಗಳ ಕುರಿತು ಪುನಃ ಪುನಃ ಯೋಚಿಸು ವುದು ಅಭ್ಯಾಸ. ವೈರಾಗ್ಯ ವಿಧ್ವಂಸಕ ಕ್ರಿಯೆ, ಅಭ್ಯಾಸವು ವಿಧಾಯಕ ಕ್ರಿಯೆ, ಒಟ್ಟಾರೆ ಎಲ್ಲಾ ಉಪಾಯಗಳಿಗೂ ಅಗತ್ಯ ಬೇಕಾದುದು ಭಕ್ತಿ. ಈ ಭಕ್ತಿ ಎಂಬುದು ಸಾರ್ವಭೌಮ ಉಪಾಯ. ದೃಷ್ಟಾಂತ:- ಸೇವಾ ಶಾಸ್ತ್ರ ತಿಳಿದವನು, ಉಪಚಾರ ಮಾಡುವ ಕ್ರಮವನ್ನು ಅರಿತವನು ಮಾತ್ರ ರೋಗಿಯ ಶುಶ್ರೂಸೆಗೆ ಹೋಗಬೇಕು. ಆದರೆ ಅವನಿಗೆ ಅದರ ಅನುಭವ ಇರದಿದ್ದರೆ ನಿಜವಾದ ಸೇವೆ ಆದೀತೆ? ಎತ್ತುಗಳೇನೋ ಗಟ್ಟಿ ಮುಟ್ಟಾಗಿರಬಹುದು. ಆದರೆ ಅದಕೆ ಬಂಡಿ ಎಳೆವ ಮನಸ್ಸೇ ಇಲ್ಲ ದಿದ್ದರೆ ಆ ಬಂಡಿ ನೆಲಹಿಡಿದು ನಿಲ್ಲಬಹುದು. ಅಥವಾ ಬಂಡಿಯನ್ನು ತಗ್ಗಿನಲ್ಲಿ ನೂಕಿಬಿಟ್ಟೀತು. ಮನಸ್ಸು ಅಂದರೆ ಭಕ್ತಿ (ಪ್ರೀತಿ) ಇಲ್ಲದೆ ಮಾಡುವ ಕರ್ಮದಿಂದ ತುಷ್ಟಿ-ಪುಷ್ಟಿ ಯಾವುದೂ ಇಲ್ಲ...

ಭಕ್ತರಲ್ಲಿ ಮೂರು ಪಂಗಡಗಳಿವೆ;— (1) ಸಕಾಮಭಕ್ತ. (2) ನಿಷ್ಕಾಮಭಕ್ತ. (3) ಜ್ಞಾನಿ ಸಂಪೂರ್ಣಭಕ್ತ. ಹೀಗೆ ಮೂರು ವಿಧಗಳಾಗಿವೆ...

ಈ ಮೂರು ವರ್ಗದ ಭಕ್ತರೂ ಸಿಷ್ಕಾಮರೇ ಆಗಿರುವರು. ಆದರೆ ಏಕಾಂಗಿಗಳು, ಕರ್ಮದ ದ್ವಾರ ಒಬ್ಬ, ಹೃದಯದ ದ್ವಾರ ಇನ್ನೊಬ್ಬ, ಬುದ್ಧಿಯ ದ್ವಾರ ಮತ್ತೊಬ್ಬ. ಇವರು ಪರಮಾತ್ಮನಾಗ ಬೇಕೆಂದು ಪ್ರಯತ್ನಪಡುವವರು. ಇನ್ನುಳಿದಾತ ಪೂರ್ಣಭಕ್ತ. ಜ್ಞಾನಿ ಅಥವಾ ಭಕ್ತನೆನ್ನುವುದು ಇವನನ್ನೇ. ಇವನ ಕಣ್ಣಿಗೆ ಕಾಣುವುದೆಲ್ಲವೂ ದೈವಸ್ವರೂಪ. ಕುರೂಪಿ-ಸುರೂಪಿ, ಶ್ರೀಮಂತ-ದರಿದ್ರ, ಸ್ತ್ರೀ-ಪುರುಷ, ಪಶು-ಪಕ್ಷಿ, ಇತ್ಯಾದಿ ಎಲ್ಲೆಲ್ಲೂ ಪರಮಾತ್ಮನ ಪಾವನ ದರ್ಶನವೇ ಗೋಚರಿಸುತ್ತಿದೆ...

" ಜೀವನ - ಪಾವನ "

# ಆತ್ಮದರ್ಶನ

(ದರ್ಶನ ಅಂದರೆ "ತತ್ವವಿಚಾರ" ಎಂದು ಅರ್ಥ)

ನಿತ್ಯಾನಂದಪೇಕ್ಷಿಯು ಅಂದರೆ ಮೋಕ್ಷಾಭಿಲಾಷಿಯಾಗಿ ಆತ್ಮಧ್ಯಾನ ಮಾಡುವವರು ಮೊದಲಾಗಿ ಕೆಲವು ವಿಚಾರಗಳನ್ನು ಅಗತ್ಯ ತಿಳಿದು ಕೊಳ್ಳಬೇಕು. ಯಾವುದೆಂದರೆ:- 1) ಕಾಲ (ಸಮಯ)ದ ವಿಚಾರ:- ಆತ್ಮ (ದರ್ಶನ) ಧ್ಯಾನ ಮಾಡಲು ಪೂರ್ವಾಹ್ನ, ಮಧ್ಯಾಹ್ನ, ಮತ್ತು ಸಾಯಂಕಾಲದ ಸಂಧಿಸಮಯ. ಈ ಮೂರು ವೇಳೆಯೇ ಉತ್ತಮ ವಾಗಿರುತ್ತದೆ. ಈ ಪ್ರತಿಯೊಂದು ಕಾಲಗಳಲ್ಲಿಯೂ ಆರು ಘಟಿಗಳು (ಒಂದು ಘಟಿ ಅಂದರೆ 24 ಮಿನಿಟು) ಶ್ರೇಷ್ಠವಾಗಿವೆ. ಹೇಗೆಂದರೆ ಸೂರ್ಯೋದಯಕ್ಕೆ ಮೂರು ಘಟಿ ಹಿಂದೆ, ಹಾಗೆಯೇ ಮೂರು ಘಟಿ ಮುಂದೆ, ಹೀಗೆಯೇ ಮಧ್ಯಾಹ್ನ ಮತ್ತು ಸಾಯಂಕಾಲ ಮೂರು ಮೂರು ಘಟಿಗಳು ಹಿಂದೆ ಮುಂದೆ ಜೋಡಿಸಿ ಆರು ಘಟಿಗಳ ಕಾಲ ಆತ್ಮಧ್ಯಾನಕ್ಕೆ ಉತ್ತಮೋತ್ತಮ ಕಾಲವಾಗಿದೆ. ಈ ಆರು ಘಟಿಗಳಿಗಿಂತ ಕಮ್ಮಿಯಾದರೆ ಮಧ್ಯಮವೆಂದೂ, ಬರೇ ಎರಡು ಘಟಿಗಳ ಕಾಲವು ಜಘನ್ಯ (ಸಾಮಾನ್ಯ)ವೆಂದೂ ತಿಳಿಯಬೇಕು. ಇದರಂತೆಯೇ ರಾತ್ರಿ

ಹನ್ನೆರಡು ಗಂಟೆಯ ಹಿಂದೆ ಮುಂದೆ ಆರು ಘಟಿ-ವ-ಎರಡು ಘಟಿ ಯಾದರೂ ಅಂತೂ ಸಮಯ ದೊರೆಯುವಾಗ ಆತ್ಮಧ್ಯಾನ ಮಾಡುವುದು ಶುಭಕರ ಎಂದೇ ತಿಳಿಯಬೇಕು.

2) ಆತ್ಮಧ್ಯಾನಕ್ಕೆ ಕೂತುಕೊಳ್ಳು ಸ್ಥಳ (ಜಾಗ) ಹೇಗಿರಬೇಕು? ಧ್ಯಾನಾಭ್ಯಾಸಕ್ಕೆ ಕೂತುಕೊಳ್ಳುವ ಸ್ಥಳವು ಉತ್ತಮವಾಗಿರಬೇಕು. ಅಂದರೆ, ಆ ಸ್ಥಳದಲ್ಲಿ ಗಲಾಟೆ ಇರಬಾರದು. ದುಷ್ಟಜನರು, ವ್ಯಭಿಚಾರಿ ಗಳು, ಸ್ತ್ರೀಯರು, ನಪುಂಸಕರು ಸುತ್ತಾಡುವ ಸ್ಥಳ ಆಗಿರಬಾರದು. ಸಮೀಪದಲ್ಲಿ ನರ್ತನ, ಗಾನ (ಸಂಗೀತಗಳೂ, ದುರ್ಗಂಧ ಬರುವ ಸ್ಥಳವೂ, ಹೆಚ್ಚಿನ ಸೆಕೆ (ಗರ್ಮಿ) ಮತ್ತು ಛಳಿ ಪ್ರದೇಶ, ಭಯಂಕರ ಪ್ರಾಣಿಗಳು ಸಂಚರಿಸುವ ಸ್ಥಳ ಇತ್ಯಾದಿ ಆಗಿರಬಾರದು. ತಾತ್ಪರ್ಯ ವೇನೆಂದರೆ ಆತ್ಮಧ್ಯಾನದ ಸಮಯ ಮನಸ್ಸು ಚಂಚಲವಾಗದೆ ಇರುವ ವಿಘ್ನಗಳು ಬಾರದಿರುವ ಸ್ಥಳವನ್ನೇ ಆರಿಸಿಕೊಳ್ಳಬೇಕು...

ಧ್ಯಾನಾಭ್ಯಾಸಕ್ಕೆ ಸುಯೋಗ್ಯವಾದ ಸ್ಥಳಗಳು ಯಾವುದೆಂದರೆ:- ಸಿದ್ಧಕ್ಷೇತ್ರ, ತೀರ್ಥಂಕರರಿಗೆ ಪಂಚಕಲ್ಯಾಣಗಳಾದ ಸ್ಥಳ, ಸಮುದ್ರ ಕಿನಾರೆ (ಬಳಿ), ವನ, ಪರ್ವತಶಿಖರ, ನದಿ (ಹೊಳೆ), ಪೇಟೆಯ ಹೊರಗೆ ಇರುವ ಕೋಟೆ, ನದಿಗಳ ಸಂಗಮ ಸ್ಥಳ, ನೀರಿನ ಮಧ್ಯೆ ಇರುವ ದ್ವೀಪ ವ-ಗುಡ್ಡದ ಮೇಲೆ, ಪ್ರಾಚೀನವಾದ ವನ, ಸ್ಮಶಾನದ ಬಳಿವ-ಮಧ್ಯ ಸ್ಥಳ, ಪರ್ವತದಲ್ಲಿರುವ ಗುಹೆ, ದೇವಮಂದಿರ, ಜನಸಂಚಾರ, ವಾಸ ಇಲ್ಲದ ಗೃಹ, ತುಂಬಾ ಮರಗಳು ಬೆಳೆದು ಪ್ರಶಾಂತವಾಗಿರುವ ಸ್ಥಳ, ಇವೆಲ್ಲಾ ಆತ್ಮಧ್ಯಾನಕ್ಕೆ ಸುಯೋಗ್ಯ ಸ್ಥಳವಾಗಿವೆ...

ಈ ರೀತಿಯಲ್ಲಿರುವ ಸ್ಥಳಗಳಲ್ಲಿ ಸಣ್ಣ ಚಾಪೆ-ಹಲಿಗೆ ಅಥವಾ ಸರಿ ಸಮಾನವಾದ ಕಲ್ಲು ಮತ್ತು ನಿರ್ಭಾದವಾದ ಭೂಮಿಯ ಮೇಲಾಗಲೀ ಕೂತುಕೊಳ್ಳುವುದು ಯೋಗ್ಯ ಸ್ಥಳವಾಗಿದೆ...

3) ಧ್ಯಾನವು ಸುಗಮವಾಗಿ ಆಗಬೇಕಾದರೆ ಮನಸ್ಸು ಸ್ಥಿರವಾಗಿರ ಬೇಕು. ಮನಸ್ಸು ಸ್ಥಿರವಾಗಿರಬೇಕಾದರೆ ಕೂತುಕೊಳ್ಳುವ ಆಸನ ಸ್ಥಳವೂ ಯೋಗ್ಯವಾಗಿರಬೇಕಾಗುತ್ತದೆ...

ಧ್ಯಾನಾಭ್ಯಾಸಕ್ಕೆ ಪದ್ಮಾಸನ ಮತ್ತು ಪಲ್ಯಂಕಾಸನ ಉತ್ತಮವಾಗಿರುತ್ತದೆ. ಈ ಪದ್ಮಾಸನ ಮತ್ತು ಪದ್ಮಾಸನಗಳನ್ನು ಸುಲಭವಾಗಿ ತಿಳಿಯಬೇಕಾದರೆ ಜಿನಮಂದಿರದಲ್ಲಿ ಕೂತುಕೊಂಡಿರುವ ಜಿನಬಿಂಬಗಳನ್ನು ನೋಡಬೇಕು. ಆ ಜಿನಬಿಂಬಗಳಿರುವಂತೆ ದೇಹವನ್ನು ಅಲ್ಲಾಡಿಸದೆ ಅಂದರೆ ಕಷ್ಟವಾಗದ ರೀತಿಯಲ್ಲಿ ಕೂತುಕೊಳ್ಳಬೇಕು. ಎಡಕಾಲಿನ ಮೇಲೆ ಬಲಗಾಲನ್ನಿಟ್ಟು ಪಾದಗಳ ಬುಡದ ಮೇಲ್ಭಾಗದಲ್ಲಿ, ಎಡಹಸ್ತದ ಅಂಗೈಮೇಲೆ ಬಲಅಂಗೈಇಟ್ಟು, ತನ್ನೆರಡೂ ಕಣ್ಣುಗಳನ್ನೂ ಸಂಪೂರ್ಣ ತೆರೆಯದೆ ಹಾಗೂ ಸಂಪೂರ್ಣ ಮುಚ್ಚದೆ ಮೂಗಿನ ಬುಡ (ನಾಸಿಕಾಗ್ರ ಭಾಗ)ಕ್ಕೆ ಎರಡೂ ಕಣ್ಣುಗಳ ದೃಷ್ಟಿಯನ್ನಿರಿಸಿ, ಅಂದರೆ ತನ್ನ ದೇಹದ ಹೊರತು ಹೊರಗಿನ ಯಾವುದೊಂದೂ ಕಣ್ಣಿಗೆ ಗೋಚರವಾಗದ ರೀತಿಯಲ್ಲಿ, ದೇಹವನ್ನು ಬಾಗಿಸದೆ. ಕುಗ್ಗಿಸದೆ ಸರಳರೀತಿಯಲ್ಲಿ ಕೂತುಕೊಳ್ಳಬೇಕು. ಇದರಂತೆಯೇ " ಕಾಯೋತ್ಸರ್ಗ " (ನಿಂತುಕೊಂಡು) ಆಸನವೂ ಧ್ಯಾನಾಭ್ಯಾಸಕ್ಕೆ ಯೋಗ್ಯವಾಗಿದೆ. ಕಾಯೋತ್ಸರ್ಗ ಅಂದರೆ ನಿಂತುಕೊಂಡು ಧ್ಯಾನಮಾಡುವುದಾಗಿದೆ. ಇದನ್ನು ಕೂಡಾ ಜಿನಮಂದಿರದಲ್ಲಿರುವ ಜಿನಬಿಂಬವನ್ನು ನೋಡಿ ಅದರಂತೆಯೇ ನಿಂತುಕೊಂಡು ಅಭ್ಯಾಸಮಾಡಬೇಕು. ಧ್ಯಾನಾಭ್ಯಾಸಕ್ಕೆ ಆಸನಗಳು ಹಲವಾರು ಇದ್ದರೂ ಈ ಪಂಚಮಕಾಲದಲ್ಲಿ ಮೇಲಿನ ಪದ್ಮಾಸನ, ಪಲ್ಯಂಕಾಸನ ಮತ್ತು ಕಾಯೋತ್ಸರ್ಗ ಈ ಮೂರು ಆಸನಗಳೇ ಉತ್ತಮವಾಗಿರುವುದೆಂದು ತಿಳಿಯಬೇಕು ..

**ಸಾಮಾಯಿಕ ವಿಧಿ :—**

ಧ್ಯಾನಾಭ್ಯಾಸ ಆರಂಭ ಮಾಡುವ ಮೊದಲು ಕೆಲವು ನಿಯಮಗಳನ್ನು ತಿಳಿದಿರಬೇಕು. ಯಾವುದೆಂದರೆ:- ಪ್ರತಿಯೊಂದು ವ್ಯವಹಾರಗಳನ್ನು ನಿಲ್ಲಿಸಿ, ಅತ್ತಿತ್ತ ಓಡಾಡುತ್ತಿರುವ ಮನಸ್ಸನ್ನು ಸಂಪೂರ್ಣ ಹಿಡಿತದಲ್ಲಿರಿಸಿ, ಮನಸ್ಸು-ವಚನ-ಕಾಯ (ದೇಹ)ಗಳ ಕ್ರಿಯೆಗಳನ್ನೂ ಹತೋಟಿಯಲ್ಲಿರಿಸಿ, ಅಂದರೆ ಸ್ಥಿರವಾಗಿರಿಸಿ, ಅಶುಚಿಯಾದ ದೇಹವನ್ನು ಸ್ನಾನಾದಿಗಳಿಂದ ಶುಚಿಗೊಳಿಸಿ, ಶುಭ್ರವಾದ ಬಟ್ಟೆಗಳನ್ನು ಆದಷ್ಟು

ಕನ್ಮಿಷ್ಟಯಾಗಿ ಧರಿಸಿಕೊಂಡು, ಅತಿ ಚಳಿ, ಅತಿ ಗರ್ಮಿ, ಇಲ್ಲದ ಸ್ಥಳದಲ್ಲಿ ಮನ - ವಚನ - ಕಾಯ (ತ್ರಿಕರಣ) ಶುದ್ಧಿಯಿಂದ ಉತ್ತಮ ಕಾಲದಲ್ಲಿ ಅಂದರೆ, ಪೂರ್ವಾಹ್ನ - ಮಧ್ಯಾಹ್ನ ಮತ್ತು ಸಂಧ್ಯಾ ಸಮಯದಲ್ಲಿ ನಿರ್ಭಾದವೂ, ಏಕಾಂತವೂ ಆಗಿರುವ ಸ್ಥಳದಲ್ಲಿ, ಮೊದಲು ಹೇಳಿರುವ ಮೂರು ಆಸನಗಳ ಪೈಕಿ ತನಗೆ ಇಷ್ಟವೂ, ಸುಲಭವಾದ ಆಸನದಲ್ಲಿ ಪೂರ್ವ-ಅಥವಾ ಉತ್ತರ ದಿಕ್ಕಿಗೆ ಮುಖ ಮಾಡಿ (ಧ್ಯಾನಾಭ್ಯಾಸಕ್ಕೆ ಪಶ್ಚಿಮ-ದಕ್ಷಿಣ ದಿಕ್ಕುಗಳು ನಿಷೇಧವೆಂದು ತಿಳಿಯಬೇಕು) ಕೂತು ಕೊಂಡು ಆತ್ಮಚಿಂತನೆಗೆ ಆರಂಭಿಸಬೇಕು...

ಮೇಲಿನಂತೆ ಕೂತುಕೊಂಡು ಪ್ರಾರಂಭದಲ್ಲಿ ಒಂಭತ್ತು ಸರ್ತಿ ಮಹಾಮಂಗಲ ಪಂಚನಮುಸ್ಕಾರ ಮಂತ್ರವನ್ನು ಸ್ಮರಿಸಿ-ವ-ಉಚ್ಛರಿಸಿ ಕೈಜೋಡಿಸಿ ತನ್ನ ಶಿರವನ್ನು ಭೂಮಿ ತನಕ ಬಾಗಿಸಿ ನಮುಸ್ಕರಿಸಿ, ತಾನು ಪ್ರತಿಜ್ಞೆಯನ್ನು ಮಾಡಿಕೊಳ್ಳಬೇಕು. ಏನೆಂದರೆ:- ನಾನು ಕೂತಲ್ಲಿಂದ ಏಳಬೇಕಾಗುವ ಸಮಯದ ವರೆಗೆ ನನ್ನ ಪ್ರತಿಯೊಂದು ಕೆಲಸಗಳನ್ನೂ ತ್ಯಾಗ ಮಾಡಿರುವೆನು. ನಾನು ಇರುವ ಸ್ಥಳದಿಂದ ಹಿಂದೆ ಮುಂದೆ ಮತ್ತು ಎಡಬಲಕ್ಕೆ ಒಂದು ಮೊಳದ ವಿಸ್ತಾರ ಬಿಟ್ಟು ಮುಂದಕ್ಕೆ ಚಲಿಸ ಲಾರೆನು. ಕಾಯೋತ್ಸರ್ಗ ಆಸನದಲ್ಲಿ ನಿಲ್ಲಲು ಅಥವಾ ಮೂರು ಸರ್ತಿ ಅಥವಾ ಒಂಭತ್ತು ಸರ್ತಿ ಪಂಚನಮುಸ್ಕಾರ ಮಂತ್ರ ಹೇಳಿ ನಮುಸ್ಕರಿಸಲು ಮಾತ್ರ ನನ್ನ ದೇಹದ ಚಲನೆಯನ್ನು ಮಾಡುವೆನು. ಅಂದರೆ ಪೂಜ್ಯವಾದ ಸಿದ್ಧಕ್ಷೇತ್ರ, ಪುಣ್ಯಕ್ಷೇತ್ರ ಹಾಗೂ ತೀರ್ಥಂಕರರು, ಅರಹಂತರು, ಸಾಧುಗಳ ಸಮೂಹಕ್ಕೆ ವಂದನೆ ಮಾಡಲು ಮಾತ್ರ ಹೀಗೆ ಮಾಡುವೆನು. ಧ್ಯಾನಾಭ್ಯಾಸವು ಸುಖವಾಗಿ ಪರಿಣಮಿಸಲು ಮೂರು ರೀತಿಯ ಆಸನ ಗಳಿಗಾಗಿ ನನ್ನ ದೇಹಚಲನೆಯನ್ನು ಮಾಡುವೆನು.

ಧ್ಯಾನಾಭ್ಯಾಸಕ್ಕೆ ಸಹಕಾರಿಯಾದ ಸಾಮಾಯಿಕ ಸ್ತೋತ್ರಗಳನ್ನು ಮಂದಸ್ವರದಿಂದ ಹೇಳುವೆನು. ಅದರ ಭಾವಾರ್ಥಗಳನ್ನು ಚಿಂತಿಸು ವೆನು. ಪಂಚನಮುಸ್ಕಾರ ಅಥವಾ ಬೇರೆ ಉತ್ಕೃಷ್ಟವಾದ ಮಂತ್ರಗಳನ್ನು ಉಚ್ಚರಿಸುವೆನು. 108 ಜಪಸಂಖ್ಯೆಗೆ ಬೇಕಾಗಿ ಜಪಸರವನ್ನು ಹಿಡಿಯು ವೆನು. ಅಥವಾ ಸಂದರ್ಭಾನುಸಾರ ಬೆರಳುಗಳನ್ನೂ ಉಪಯೋಗ



1 ಧ್ಯಾನಾಭ್ಯಾಸ ಮುದ್ರೆ



2 ಪಾರ್ಥಿವೀ ಧಾರಣಾ ಸ್ವರೂಪ



3 ಅಗ್ನೆಯಿ ಧಾರಣ ಸ್ವರೂಪ



4 ಅಗ್ನೆಯೀ ಧಾರಣಾ



7 ಅಗ್ನೆಯೀ ಧಾರಣಾ



8 ಶ್ವಸನಾ - ಯಾ - ವಾಯು ಧಾರಣಾ



9 ವಾರುಣೀ ಅಥವಾ ಜಲ ಧಾರಣಾ



10 ತತ್ವರೂಪವತೀ ಶುದ್ಧ ಧಾರಣಾ

ಮಾಡುವೆನು. ಇತ್ಯಾದಿಗಳ ನಿರ್ಣಯಗಳನ್ನು ಮೊದಲೇ ಮಾಡಿ ಕೊಳ್ಳುವುದು...

ಇದರ ನಂತರ ಸಾಮಾಯಿಕ ಪಾಠಗಳನ್ನು ಅರ್ಥಸಹಿತ ಮನಸ್ಸಿನಲ್ಲಿಯೇ ಚಿಂತಿಸುವುದು. ಣಮೋಂಕಾರ ಮಂತ್ರವನ್ನಾಗಲೀ ಅಥವಾ ಇದರಂತಿರುವ ಬೇರೆ ಮಂತ್ರವನ್ನಾಗಲೀ, ಜಪಸರದಿಂದಾಗಲೀ ಕೈ ಬೆರಳುಗಳಿಂದಾಗಲೀ 108 ಸರ್ತಿ ಜಪ ಮಾಡುವುದು. ಇದರಂತೆಯೇ ಇನ್ನೊಂದು ರೀತಿಯ ಜಪದ ಕ್ರಮವೂ ಇದೆ. ಇದಕ್ಕೆ ಕಮಲ ಜಪ ಎಂದು ಹೆಸರು. ಹೃದಯದಲ್ಲಿ ಎಂಟು ದಳಗಳುಳ್ಳ ಕಮಲವನ್ನು ರಚಿಸಿ ಈ ಮೂಲಕ ಜಪ ಮಾಡುವುದು. ಇದು ಮುನಿಗಳಿಗೆ ಸಾಧ್ಯವಲ್ಲದೆ, ಶ್ರಾವಕ-ಗೃಹಸ್ಥರಿಗೆ ಕಷ್ಟಸಾಧ್ಯವಾಗುತ್ತದೆ. ಗೃಹಸ್ಥ-ಶ್ರಾವಕರಿಗೆ ಮೊದಲಿನ ಕ್ರಮವೇ ಸುಲಭ ಸಾಧ್ಯವಾದುದರಿಂದ ಈ ವಿಷಯವನ್ನು ಸದ್ಯ ಮುಕ್ತಾಯ ಮಾಡಿದೆ...

ಈ ಜಪ ಮಾಡುವ ಮೊದಲು ತನ್ನ ದೇಹವು ಒಂದು ಗಡಿಗೆ (ಕೊಡ) ಎಂದೂ, ಇದರಲ್ಲಿ ತುಂಬಿರುವ ಆತ್ಮನು ಶುದ್ಧ ಗಂಗಾಜಲವೆಂದೂ ಗ್ರಹಿಸಿ ತನ್ನ ಮನಸ್ಸನ್ನು ಆ ಜಲಸಮೂಹದಲ್ಲಿ ಈಜಾಡುವಂತೆ ಮಾಡಿ, ಈ ಸಂದರ್ಭದಲ್ಲಿ "ಓಂ" ಅಥವಾ "ಸೋಹಂ" ಅಥವಾ ಅರ್ಹಂ ಅಥವಾ "ಸಿದ್ಧ" ಎಂಬ ಮಂತ್ರವನ್ನು ಪದೇ ಪದೇ ಧ್ಯಾನಿಸುವುದು ಮತ್ತು ಜಪಿಸುವುದು ಅಲ್ಲದೆ ಆತ್ಮನ ಶುದ್ಧ ಗುಣಗಳನ್ನು ಚಿಂತಿಸುತ್ತಿರಬೇಕು.

ಶ್ರೀ ಜ್ಞಾನಾರ್ಣವ ಎಂಬ ಗ್ರಂಥದಲ್ಲಿ ಈ ಧ್ಯಾನಾಭ್ಯಾಸವನ್ನು ನಾಲ್ಕು ವಿಧಗಳಾಗಿ ವರ್ಣಿಸಿರುತ್ತಾರೆ. 1) ಪಿಂಡಸ್ಥಧ್ಯಾನ 2) ಪದಸ್ಥ ಧ್ಯಾನ 3) ರೂಪಸ್ಥಧ್ಯಾನ 4) ರೂಪಾತೀತ ಧ್ಯಾನ ಹೀಗೆ ನಾಲ್ಕು ವಿಧಗಳಾಗಿವೆ.

ಈ ಪಿಂಡಸ್ಥಧ್ಯಾನದಲ್ಲಿಯೂ ಐದು ವಿಧಗಳಿವೆ. 1) ಪಾರ್ಥಿವೀ 2) ಆಗ್ನೇಯ 3) ಶ್ವಸನಾ (ವಾಯು) 4) ವಾರುಣೀ (ಜಲ) 5) ತತ್ವ ರೂಪವತೀ ಹೀಗೆ ಐದು ಪ್ರಕಾರ ಇರುತ್ತವೆ. ೧) ಪಾರ್ಥವೀ ಧಾರಣಾ ಕ್ರಮ:- ಈ ಮಧ್ಯಮ ಲೋಕವು ಕ್ಷೀರಸಮುದ್ರಕ್ಕೆ ಸಮಾನವಾದ

ಜಲದಿಂದ ತುಂಬಿರುವುದೆಂದೂ, ಇದರ ಮಧ್ಯೆ ಜಂಬೂದ್ವೀಪಕ್ಕೆ ಸಮಾನ ವಾದುದೂ, ಒಂದು ಸಾವಿರ ಯೋಜನ ಉದ್ದ ಅಗಲವುಳ್ಳದ್ದೂ ಒಂದು ಸಾವಿರ ದಳಗಳಿಂದ ಕೂಡಿರುವುದೂ ಬಂಗಾರ ಬಣ್ಣದ ಕಾಂತಿಯುಳ್ಳದ್ದೂ ಆದ ಒಂದು ಕಮಲ ಇದೆಯೆಂದೂ ಈ ಕಮಲದ ಮಧ್ಯದಲ್ಲಿ ಬಂಗಾರ ಬಣ್ಣಕ್ಕೆ ಸದೃಶವಾದ ಸುಮೇರು ಪರ್ವತವಿರುವುದೆಂದೂ ಚಿಂತಿಸಿ, ಈ ಪರ್ವತದ ಮೇಲಿರುವ ಪಾಂಡುಕ ವನದಲ್ಲಿ ಬಿಳಿದಾದ ಸ್ಫಟಿಕ ಶಿಲೆಯಂತಿರುವ ಸಿಂಹಾಸನ ಇರುವುದೆಂದೂ, ಈ ಸಿಂಹಾಸನ ಮಧ್ಯೆ ತಾನು ಕೂತುಕೊಂಡಿರುವೆನೆಂದೂ, ತನ್ನ ಆತ್ಮಕ್ಕೆ ಅಂಟಿದ ಕರ್ಮಗಳನ್ನು ಜಪ ಧ್ಯಾನ ಮೂಲಕ ಸುಡುತ್ತಿರುವೆನೆಂದೂ ಧ್ಯಾನಿಸುವುದು. "ಪಾರ್ಥಿವೀ ಧಾರಣ" ಧ್ಯಾನಕ್ರಮವಾಗಿದೆ. (ಚಿತ್ರ ನಂಬ್ರ ೨) (2) ಆಗ್ನೇಯ ಧಾರಣಾ ಕ್ರಮಃ- (ಚಿತ್ರ ನಂಬ್ರ ೩, ೪, ೫, ೬, ೭) ಮೇಲೆ ಹೇಳಿದಂತೆ ಸುಮೇರು ಪರ್ವತದ ಮೇಲೆ ಕೂತಿರುವ ತನ್ನ ನಾಭಿಯಲ್ಲಿ, ಬಿಳಿ ಬಣ್ಣ ಉಳ್ಳದ್ದೂ, ಮೇಲ್ಮುಖವಾಗಿರುವುದೂ, ಹದಿನಾರು ಎಸಳುಗಳುಳ್ಳದ್ದೂ ಆದ ಒಂದು ಕಮಲವನ್ನು ರಚಿಸಿ, ಆ ಪ್ರತಿಯೊಂದು ದಳಗಳಲ್ಲಿ ಹಳದಿ ಬಣ್ಣಗಳುಳ್ಳ ಹದಿನಾರು ಸ್ವರಾಕ್ಷರಗಳನ್ನು ಅಂದರೆ ಅ-ಆ-ಇ-ಈ-ಉ ಊ-ಋ-ೠ-ಲೃ-ಲೄ-ಎ-ಐ-ಓ-ಔ-ಅಂ-ಅಃ ಎಂಬ ಈ ಹದಿನಾರು ಅಕ್ಷರಗಳಿವೆಯೆಂದೂ. ಕಮಲದ ಮಧ್ಯೆ ಬಿಳಿವರ್ಣದ ಕರ್ಣಿಕೆಯಲ್ಲಿ "ಹ್ರ್ಂ" ಎಂಬ ಬೀಜಾಕ್ಷರ ಇದೆಯೆಂದೂ ಚಿಂತಿಸಬೇಕು. ಬಳಿಕ ತನ್ನ ಹೃದಯದ ಮಧ್ಯೆ ಕೆಳಮುಖವಾಗಿರುವುದೂ, ಎಂಟು ದಳಗಳಿಂದ ಕೂಡಿರುವುದೂ, ಕಂದು ಬಣ್ಣವಿರುವುದೂ ಆದ ಒಂದು ಕಮಲ ಇರುವುದೆಂದೂ ಧ್ಯಾನಿಸಬೇಕು. ಈ ಕಮಲದ ಎಂಟು ದಳಗಳಲ್ಲಿ ಕಪ್ಪು ವರ್ಣದ ಅಕ್ಷರಗಳಿಂದ ಕೂಡಿದ (1) ಜ್ಞಾನಾವರಣೀಯ (2) ದರ್ಶನಾವರಣೀಯ (3) ವೇದನೀಯ (4) ಮೋಹನೀಯ (5) ಆಯುಸ್ಸು (6) ನಾಮ (7) ಗೋತ್ರ (8) ಅಂತರಾಯಗಳೆಂಬ ಎಂಟು ಕರ್ಮಗಳಿರುವುದೆಂದೂ ಆಲೋಚಿಸಬೇಕು. ಬಳಿಕ ಕೆಳಗೆ ನಾಭಿಯಲ್ಲಿ ಕಮಲದ ಮಧ್ಯೆ ಇರುವ "ಹ್ರ್ಂ" ಎಂಬ ಬೀಜಾಕ್ಷರದಿಂದ ಅಗ್ನಿಜ್ವಾಲೆಯು ಬೆಳೆದು ವಿಸ್ತಾರವಾಗಿ ಹೊರಟು ಮೇಲೆ

ಹೃದಯಕಮಲದಲ್ಲಿರುವ ಅಷ್ಟಕರ್ಮಗಳನ್ನು ಸುಡುತ್ತಾ ಭಸ್ಮಮಾಡಿ ದುವೆಂದೂ, ಹಾಗೆಯೇ ಹೃದಯಕಮಲವನ್ನು ಭೇದಿಸಿ, ಶಿರಸ್ಸಿನ ವರೆಗೂ ಹೋಗಿದೆಯೆಂದೂ, ಗ್ರಹಿಸುತ್ತಾ ಇದೇ ರೀತಿ ತಾನು ಕೂತಿರುವ ಜಾಗದ ಕೆಳಗಡೆ ತ್ರಿಕೋನ ಆಕಾರದ ಅಗ್ನಿಮಂಡಲವನ್ನು ರಚಿಸಿ, ಆ ಅಗ್ನಿಮಂಡಲದ ಮೂರು ಕೋನಗಳು ಅಂದರೆ ಗೆರೆಗಳು ಒಂದಕ್ಕೊಂದು ಸೇರುವ ಜಾಗಗಳಲ್ಲಿ "ರಂ" ಎಂಬ ಬೀಜಾಕ್ಷರಗಳನ್ನೂ ಈ ಅಗ್ನಿಮಂಡಲ (ತ್ರಿಕೋನ)ದ ಮಧ್ಯ ಜಾಗಗಳಲ್ಲಿ "ಓಂ" ಎಂಬ ಬೀಜಾಕ್ಷರಗಳನ್ನೂ ಹಾಗೆಯೇ ಈ ತ್ರಿಕೋನದ ಹೊರಭಾಗ ರೇಖೆಗಳು ಸಂಧಿಸುವಲ್ಲಿ ಸ್ವಸ್ತಿಕ ಚಿಹ್ನೆಗಳನ್ನೂ ಚಿಂತಿಸಿ ತ್ರಿಕೋನ ಗೆರೆಯ ಹೊರ ಭಾಗದಲ್ಲಿ ಮೂರು ಕಡೆಯೂ "ರಂ ರಂ ರಂ ರಂ ರಂ ರಂ" ಎಂಬ ಆರು ಆರು ಬೀಜಾಕ್ಷರಗಳಿವೆಯೆಂದೂ, ಚಿಂತಿಸುತ್ತಾ ಅವುಗಳಿಂದ ಹೊರಡುವ ಅಗ್ನಿ ತನ್ನ ಸುತ್ತಲೂ ವಿಸ್ತರಿಸಿ ಅಂದರೆ ತನ್ನ ಶರೀರವನ್ನು ಸಂಪೂರ್ಣ ಭಸ್ಮಮಾಡಿದೆಯೆಂದು ಧ್ಯಾನಿಸುವುದೇ "ಆಗ್ನೇಯಧಾರಣಾ" ವಿಧಿಯೆಂದು ತಿಳಿಯಬೇಕು. ೩) 'ಶ್ವಸನಾ' ಅಥವಾ 'ವಾಯುಧಾರಣಾ' ಕ್ರಮ:- (ಚಿತ್ರ ನಂಬ್ರ ೮) ಮೇಲೆ ಹೇಳಿದಂತೆ ಚಿಂತಿಸಿದ ತರುವಾಯ ತನ್ನ ಸುತ್ತಲೂ ವಾಯು ತುಂಬಿರುವುದೆಂದು ಗ್ರಹಿಸಿ ಇದರ ಎಂಟು ದಿಕ್ಕುಗಳಲ್ಲಿ "ಸ್ವಾಯು ಸ್ವಾಯು" ಎಂಬ ಬೀಜಾಕ್ಷರಗಳನ್ನು ಬಿಳಿವರ್ಣ ದಲ್ಲಿ ಧ್ಯಾನಿಸಿ, ಇದು ವಾಯುಮಂಡಲವೆಂದೂ, ಈ ವಾಯುವು ತನ್ನ ದೇಹದ ಸುತ್ತಲೂ ಆಕ್ರಮಿಸಿ, ತನಗೆ ಒಡೆದು ಅಗ್ನಿಜ್ವಾಲೆಯಲ್ಲಿ ಮೊದಲೇ ದಗ್ಧ (ಸುಟ್ಟು) ವಾಗಿ ಆತ್ಮನಿಗೆ ಅಂಟಿರುವ ಕರ್ಮ ಸಮೂಹವನ್ನು ಗುಡಿಸಿಬಿಡುತ್ತದೆ ಅಂದರೆ ಆತ್ಮನನ್ನು ಶುದ್ಧವಾಗಿ ಮಾಡುತ್ತಲಿದೆ ಎಂದು ಧ್ಯಾನಿಸುತ್ತಿರಬೇಕು. ೪) 'ವಾರುಣಿ' ಅಥವಾ 'ಜಲಧಾರಣಾ' ಕ್ರಮ:- (ಚಿತ್ರ ನಂಬ್ರ ೯) ತನ್ನ ಮೇಲ್ಗಡೆಯಿರುವ ಆಕಾಶ ಪ್ರದೇಶದಲ್ಲಿ ಮೋಡಗಳು ತುಂಬಿದ್ದು, ಗುಡುಗು ಮಿಂಚುಗಳಿಂದ ಆರ್ಭಟಿಸುತ್ತಾ ಮಳೆ ಸುರಿಸುತ್ತವೆಯೆಂದು ಧ್ಯಾನಿಸಿ, ತನ್ನ ಮೇಲ್ಗಡೆ ಅರ್ಧ ಚಂದ್ರಾ ಕಾರವಾಗಿರುವ ಜಲಮಂಡಲ ಇರುತ್ತದೆಯೆಂದೂ ಆ ಮಂಡಲದ ಮಧ್ಯೆ ಪ-ಪ-ಪ-ಪ ಎಂಬ ಜಲಬೀಜಾಕ್ಷರಗಳಿವೆಯೆಂದೂ ಆ ಮಂಡಲದಿಂದ

ತನ್ನ ಮೇಲೆ ಮಳೆ ಸುರಿಸುತ್ತಾ ತಾನು ಅಂದರೆ ತನ್ನ ಆತ್ಮನಿಗೆ ಅಂಟಿಕೊಂಡಿದ್ದ ಎಲ್ಲಾ ಕರ್ಮಗಳೆಂಬ ಕೊಳೆಗಳು ತೊಳೆದುಹೋಗಿ ತಾನು ಪರಿಶುದ್ಧನಾದೆನೆಂದು ಚಿಂತಿಸಬೇಕು. ೫) ತತ್ವರೂಪವತೀ ಧಾರಣಾ ಕ್ರಮ: (ಚಿತ್ರ ನಂಬ್ರ ೧೦) ಮೇಲಿನಂತೆ ಧ್ಯಾನಿಸುತ್ತಾ ತಾನು ಸಿದ್ಧಪರಮೇಷ್ಠಿಗಳ ಹಾಗೆ ಸರ್ವಜ್ಞನೂ, ನಿರ್ಮಲನೂ, ಪೂರ್ಣನೂ, ಚಂದ್ರನಂತಿರುವ ಪ್ರಕಾಶಮಯನೂ, ಶರೀರರಹಿತನೂ ಆಗಿರುವನೆಂದು ಧ್ಯಾನಿಸಬೇಕು. ಅಂದರೆ ಶುದ್ಧಸ್ಫಟಿಕದ ಜಿನಬಿಂಬದಂತೆ ತಾನಾದೆನೆಂದು ಧ್ಯಾನಿಸಬೇಕು.

ಈ ಮೇಲಿನ ಐದು ವಿಧದ ಧ್ಯಾನಾಭ್ಯಾಸಕ್ಕೆ "ಪಿಂಡಸ್ಥಧ್ಯಾನ" ಎಂದು ಹೆಸರು. ಇವುಗಳಲ್ಲಿ ಒಂದೊಂದನ್ನೇ ಮೊದಲು ಅಭ್ಯಾಸ ಮಾಡುತ್ತಾ ಕೊನೆಗೆ ಹತ್ತು ಚಿತ್ರಗಳಲ್ಲಿಯ ಕ್ರಮಗಳನ್ನೂ ಅಭ್ಯಾಸ ಮಾಡಿ ಪೂರ್ತಿಯಾದಾಗ, ಮಹದಾನಂದವೂ, ಶಾಂತಿಯೂ, ತಲೆ ದೋರುವುದಲ್ಲದೆ ಆತ್ಮನಿಗೆ ಅಂಟಿರುವ ಕರ್ಮಗಳು ನಿರ್ಜರೆಯಾಗಲು ಇದು ಸುಲಭ ಸಾಧನವಾಗಿರುತ್ತದೆ...

## "ಪಿಂಡಸ್ಥ"ಧ್ಯಾನದಲ್ಲಿ ಇನ್ನೊಂದು ವಿಧಿ

ಶ್ವಾಸೋಚ್ಛ್ವಾಸ ತ್ರಯಾಣಾಂಹಿ, ಏಕಾಃಪಂಚನಮಸ್ಕೃತಿಃ ॥

ಎಂಬಂತೆ ಪ್ರತಿಯೊಬ್ಬ ಆರೋಗ್ಯಶಾಲಿಯಾದ ಮನುಷ್ಯನು ಪ್ರತಿ ದಿನವೊಂದರಲ್ಲಿ 7200 ಸರ್ತಿ ಶ್ವಾಸೋಚ್ಛ್ವಾಸ ಬಿಡುತ್ತಾನೆ. ಇದರಲ್ಲಿ "ಪೂರಕ" "ಕುಂಭಕ" ಮತ್ತು "ರೇಚಕ" ಹೀಗೆ ಮೂರು ವಿಧವಿದೆ.

ಮೂಗಿನ ಎಡಭಾಗ (ಚಂದ)ದಿಂದ ಶ್ವಾಸವನ್ನು ಮೇಲೆ ಎಳೆಕೊಳ್ಳುವುದು "ಪೂರಕ" ಎಂದೂ, ಅದೇಶ್ವಾಸವನ್ನು ಹೃದಯದಲ್ಲಿ ನಿಲ್ಲಿಸುವುದು "ಕುಂಭಕ" ಎಂದೂ, ಹಾಗೆಯೇ ಅಲ್ಲಿರುವ ಶ್ವಾಸ (ಗಾಳಿ)ವನ್ನು ಮೂಗಿನ ಬಲಭಾಗ (ಸೂರ್ಯ)ದಿಂದ ಹೊರಗೆ ಬಿಡುವುದು "ರೇಚಕ" ಎಂದೂ ಹೆಸರಾಗಿದೆ. ಈ ಶ್ವಾಸ(ಗಾಳಿ)ವನ್ನು ಮೇಲೆ

ಎಳಕೊಳ್ಳುವಾಗ (ಪೂರಕ) "ಸ" ಕಾರ ಶಬ್ದ ಹೊರಡುತ್ತದೆ. ಆ ಗಾಳಿಯನ್ನು ಹೊರಗೆ ಬಿಡುವಾಗ (ರೇಚಕ) "ಹ" ಕಾರ ಶಬ್ದ ಹೊರಡುತ್ತದೆ. ಈ ಎರಡು ಅಕ್ಷರಗಳನ್ನು ಜೋಡಿಸುವಾಗ "ಸೋಹಂ" ಎಂದಾಗುತ್ತದೆ. ಇದನ್ನೇ ಹಿಂದೆ ಮುಂದೆ ಮಾಡಿದರೆ "ಹಂಸ" ಎಂದಾಗುವುದು. ಇದೇ "ಪರಮಾತ್ಮ ಎಂದು ತಿಳಿಯಬೇಕು.

ಶ್ಲೋಕ:– ಪದಸ್ಥಂ ಮಂತ್ರವಾಕ್ಯಸ್ಥಂ। ಪಿಂಡಸ್ಥಂ ಸ್ವಾತ್ಮ ಚಿಂತನಂ ॥
ರೂಪಸ್ಥಂ ಸರ್ವಚಿದ್ರೂಪಂ। ರೂಪಾತೀತ ನಿರಂಜನಂ ॥

ಅಂತರಾತ್ಮದರ್ಶನಾಪೇಕ್ಷೆಯು ಪ್ರತಿದಿನ ಮೇಲಿನ ನಿಯಮದಂತೆ ಕೂತುಕೊಂಡು ಮೂಗಿನ ಎಡಭಾಗದಿಂದ ಶ್ವಾಸ ಎಳೆದುಕೊಂಡು ಹೃದಯದಲ್ಲಿ ನಿಲ್ಲಿಸುವಾಗ ತನ್ನ ಹಣೆಯಲ್ಲಿ "ಓಂ ಣಮೋ ಅರಿಹಂತಾಣಂ" ಎಂಬ ಮಂತ್ರದ ಅಕ್ಷರಗಳನ್ನುಮತ್ತು "ಶ್ರೀ ಅರಿಹಂತರ" ಸ್ವರೂಪವನ್ನೂ ಚಿಂತಿಸಬೇಕು. ಇದರಂತೆಯೇ ಶ್ವಾಸ ಬಿಡುವಾಗ "ಓಂ ಣಮೋ ಸಿದ್ಧಾಣಂ" ಎಂಬ ಮಂತ್ರದ ಅಕ್ಷರಗಳನ್ನೂ 'ಶ್ರೀ ಸಿದ್ಧರ' ಸ್ವರೂಪವನ್ನೂ ಹಣೆಯಲ್ಲಿ ಸ್ಥಿರಗೊಳಿಸಬೇಕು. ಇದರಂತೆಯೇ ಶ್ವಾಸ ಎಳೆದುಕೊಳ್ಳುವಾಗ ಹಣೆಯಲ್ಲಿ "ಓಂ ಣಮೋ ಆಯಿರಿಯಾಣಂ" ಎಂಬ ಮಂತ್ರಾಕ್ಷರ ಮತ್ತು "ಆಚಾರ್ಯ ಪರಮೇಷ್ಠಿ"ಯ ಸ್ವರೂಪವನ್ನೂ ಹಣೆಯಲ್ಲಿ ಸ್ಥಿರಗೊಳಿಸುವುದು. ಹಾಗೆಯೇ ಶ್ವಾಸ ಬಿಡುವಾಗ "ಣಮೋ ಉವಜ್ಝಾಯಾಣಂ" ಎಂಬ ಮಂತ್ರಾಕ್ಷರ ಮತ್ತು ಸ್ವರೂಪವನ್ನು ಹಣೆಯಲ್ಲಿ ಚಿಂತಿಸಿ ಶ್ವಾಸ ಎಳೆದುಕೊಳ್ಳುವಾಗ "ಓಂ ಣಮೋ ಲೋಏ" ಎಂಬುದನ್ನು ಹಣೆಯಲ್ಲಿ ಚಿಂತಿಸಿ, ಶ್ವಾಸ ಬಿಡುವಾಗ "ಸವ್ವ ಸಾಹೂಣಂ" ಎಂಬುವ ಮಂತ್ರ ಮತ್ತು ಸ್ವರೂಪಗಳನ್ನು ಹಣೆಯಲ್ಲಿ ಚಿಂತಿಸುವುದು...

ಶ್ಲೋಕ:– ವಾರಂ ವಾರಂ ಜಪೇನ್ಮಂತ್ರಂ। ಯಾವತ್ಸಿದ್ಧಿ ಮವಾಪ್ನುತಿ॥

ಅಂದರೆ "ವಾರಂ ವಾರಂ" ಅಂದರೆ ಪುನಃ ಪುನಃ ಎಂದರ್ಥ...
ಮುಖ್ಯಾಂಶ:– ಮೇಲಿನ ಕ್ರಮದಂತೆ 27 ಸರ್ತಿ ವ 9 ಸರ್ತಿಯಾದರೂ ಈ ರೀತಿ ಧ್ಯಾನಿಸಬೇಕು. ಅಂದರೆ ಶ್ರೀ ಪಂಚಪರಮೇಷ್ಠಿ ಮಂತ್ರದ

ಪದಾಕ್ಷರಗಳನ್ನೂ, ಅವರ ಸ್ವರೂಪಗಳನ್ನೂ ಹಣೆಯಲ್ಲಿ ಕಾಣುವಂತೆ ಜಪಿಸಬೇಕು. ಒಂದು ವೇಳೆ ಮನಸ್ಸು ಚಂಚಲವಾದರೆ ಪುನಃ ಮೊದಲಿನಿಂದಲೇ ಧ್ಯಾನಿಸಬೇಕು. ಇದು ಕೂಡಾ "ಪಿಂಡಸ್ಥ ಧ್ಯಾನ"ದ ಒಂದು ಕ್ರಮವಾಗಿದೆ.

ಶ್ಲೋಕ:– ಜ್ವಲದೋಂಕಾರ ರಕಾರ ಜ್ವಾಲಾದಗ್ಧಂ ಸ್ವಮಗ್ನಿಪುರಸಂಸ್ಥಂ।
ಧ್ಯಾತ್ವಾಽಮೃತ ಮಂತ್ರೇಣ ಸ್ನಾನಂ ಪಶ್ಚಾತ್ ಕರೋತ್ವ ಮುನಾ ॥

ಎಂಬಂತೆ ತಾನು ಕೂತುಕೊಂಡ ಜಾಗದ ಕೆಳಗಡೆಗೆ ತ್ರಿಕೋಣಾಕಾರದ "ಅಗ್ನಿಮಂಡಲ"ವನ್ನು ಸ್ಥಾಪಿಸಿ, ಇದರ ಮೂರು ಕೋನಗಳು ಕೂಡುವ ಸ್ಥಳದ ಒಳಗಡೆ ಮೂರು ಸ್ಥಳದಲ್ಲಿ "ರಂ ರಂ ರಂ" ಎಂಬ ಬೀಜಾಕ್ಷರಗಳನ್ನೂ ಮಧ್ಯೆ ಜಾಗದ ಮೂರು ಸ್ಥಳಗಳಲ್ಲಿ "ಓಂ ಓಂ ಓಂ" ಎಂಬ ಬೀಜಾಕ್ಷರಗಳನ್ನೂ ಸ್ಥಾಪಿಸಿ, ತ್ರಿಕೋಣದ ಮೂರು ಮೂಲೆಯ ಹೊರಭಾಗದಲ್ಲಿ "ಸ್ವಸ್ತಿಕ" ಚಿಹ್ನೆಯನ್ನೂ ಸ್ಥಾಪಿಸಿ, ತ್ರಿಕೋನದ ಹೊರಗಿನ ಮೂರು ಭಾಗದಲ್ಲಿ "ರಂ ರಂ ರಂ ರಂ ರಂ ರಂ" ಹೀಗೆ ಆರು ಆರು ಅಗ್ನಿಬೀಜಾಕ್ಷರಗಳನ್ನು ಸ್ಥಾಪಿಸುವುದು ... ಮತ್ತು ಅಗ್ನಿ ಮಂಡಲದಿಂದ ಅಗ್ನಿಜ್ವಾಲೆಯು ಉಂಟಾಗಿ ತನ್ನ ಪುದ್ಗಲ ಶರೀರವನ್ನು ದಹನ ಮಾಡುತ್ತಿದೆಯೆಂದು ಚಿಂತಿಸುವುದಲ್ಲದೆ ತನ್ನ ನಾಭಿಕಮಲದಲ್ಲಿ ಮೇಲ್ಮುಖವಾದ 16 ದಳಗಳಲ್ಲಿ ಅ ಆ ಇ ಈ ಮೊದಲಾದ 16 ಸ್ವರಾಕ್ಷರಗಳನ್ನೂ ಕಮಲ ಮಧ್ಯದ ಕರ್ಣಿಕೆಯಲ್ಲಿ "ಪ್ರ್ರಂ" ಎಂಬ ಮಂತ್ರಾಕ್ಷರವನ್ನೂ ಇದರಂತೆಯೇ ಹೃದಯದಲ್ಲಿ ಕೆಳಮುಖವಾಗಿರುವ 8 ದಳದ ಕಮಲವನ್ನೂ ಅದರಲ್ಲಿ ಜ್ಞಾನಾವರಣೀಯ ಮೊದಲಾದ ಕಪ್ಪು ಬಣ್ಣದ 8 ಕರ್ಮಗಳನ್ನೂ ಚಿಂತಿಸುತ್ತಾ ಹೊರಗಿನ ಅಗ್ನಿಮಂಡಲದ ಜ್ವಾಲೆಯಿಂದಲೂ ನಾಭಿಕಮಲದ ಮಧ್ಯದಲ್ಲಿರುವ "ಪೂರ್ರಂ" ಎಂಬ ಬೀಜಾಕ್ಷರದ ಅಗ್ನಿಜ್ವಾಲೆಯಿಂದಲೂ ತನ್ನ ದೇಹ ಮತ್ತು 8 ಕರ್ಮಗಳೂ ದಹನವಾಯಿತೆಂದು ಚಿಂತಿಸುವುದು. ಆ ಮೇಲೆ ತನ್ನ ಆತ್ಮನಿಗೆ ಅಂಟಿರುವ ಪುದ್ಗಲ ಕರ್ಮಾಣುಗಳು ಸಂಪೂರ್ಣ ಸುಟ್ಟು (ನಿರ್ಜರೆ) ಹೋಗಿ ಉಂಟಾದ ಭಸ್ಮವು ತತ್ಕಾಲ ಬೀಸುವ ಬಿರುಗಾಳಿಯಿಂದಾಗಿ, ಹಾರಿ ಹೋಯಿತೆಂದೂ ಇದೇ ಸಮಯ ತನ್ನ ಮೇಲ್ಗಡೆಯಲ್ಲಿ ಶ್ರೀ ಮಹಾವೀರ

ಸ್ವಾಮಿಗೆ ಅಥವಾ ಶ್ರೀ ಸೀಮಂಧರ ಸ್ವಾಮಿಗೆ ದೇವೇಂದ್ರಾದಿಗಳು ಕ್ಷೀರಾಭಿಷೇಕ ಮಾಡುತ್ತಿರುವರೆಂದೂ ಸ್ವಾಮಿಯ ಮೈಮೇಲೆ ಬಿದ್ದು ಅತೀ ಪವಿತ್ರವಾದ ಕ್ಷೀರವು (ಮಳೆ) ತನ್ನ ಪ್ರದೇಶಕ್ಕೆ ಬೀಳುತ್ತಿದೆ ಯೆಂದೂ ತಾನು ನಿರ್ಮಲನೂ, ಶುದ್ಧನೂ ಆದೆನೆಂದೂ ಭಾವಿಸಬೇಕು.

ಈ ರೀತಿ ಚಿಂತನೆ ಮಾಡುವುದರಿಂದ ಧ್ಯಾನಸಮಯದಲ್ಲಿ ಬಂದೊದಗುವ ಭೂತ-ಪ್ರೇತಾದಿಗಳ ಬಾಧೆಗಳು ನಿವಾರಣೆಯಾಗುವು ದಲ್ಲದೆ ಪೂರ್ವಸಂಚಿತವಾದ ತನ್ನ ಆತ್ಮನ ಪಾಪಕರ್ಮಾಣುಗಳು ಕೂಡಾ ನಾಶ (ನಿರ್ಜರೆ) ವಾಯಿತೆಂದು ಧ್ಯಾನಿಸುವುದು ... ಇದು ಕೂಡಾ "ಪಿಂಡಸ್ಥ ಧ್ಯಾನ"ದ ಕ್ರಮವಾಗಿದೆ...

## ಪದಸ್ಥ ಧ್ಯಾನದ ಸ್ವರೂಪ

ಪದಸ್ಥ ಅಂದರೆ ಶಬ್ದಗಳು:- ಪರಮಮಂಗಲಕರವಾದ ಶ್ರೀ ಅರಹಂತ ಪರಮೇಷ್ಠಿ, ಅಥವಾ ಶ್ರೀ ಸಿದ್ಧಪರಮೇಷ್ಠಿ ಇವರ ಶಬ್ದ ಗಳನ್ನೂ, ಅವರ ಸುಗುಣಗಳನ್ನೂ ವಿಧಿಗನುಸಾರವಾದ ಸ್ಥಾನದ ಮೇಲೆ ಸ್ಥಾಪಿಸಿ, ಅದನ್ನೇ ಪದೇ ಪದೇ ಧ್ಯಾನಿಸುವುದೇ ಪದಸ್ಥಧ್ಯಾನ. ಈ ವಿಚಾರ ವನ್ನು "ಶ್ರೀ ಜ್ಞಾನಾರ್ಣವ" ಎಂಬ ಗ್ರಂಥದಲ್ಲಿ ಬಹಳ ವಿಸ್ತಾರವಾಗಿ ಹೇಳಿದ್ದಾರೆ. ಅವುಗಳಲ್ಲಿ ಕೆಲವು ಈ ಕೆಳಗಿನಂತಿವೆ.

ಈ ಧ್ಯಾನಾಭ್ಯಾಸಕ್ಕೆ ತನ್ನ ನಾಭಿ ಕಮಲದಿಂದಲೇ ಆರಂಭಿಸ ಬೇಕು. ಆರಂಭದಲ್ಲಿ ತನ್ನ ನಾಭಿ ಕಮಲದಲ್ಲಿ ಹದಿನಾರು ದಳಗಳುಳ್ಳ ಒಂದು ಕಮಲವನ್ನು ಸ್ಥಾಪಿಸಿ, ಅದರ ಒಂದೊಂದು ದಳಗಳಲ್ಲಿ ಕ್ರಮ ವಾಗಿ ಬಿಳಿವರ್ಣದಿಂದಿರುವಅ-ಆ-ಇ-ಈ-ಉ-ಊ-ಋ-ೠ-ಌ-ೡ-ಏ-ಐ-ಓ-ಔ-ಅಂ-ಅಃ ಎಂಬ ಹದಿನಾರು ಸ್ವರಾಕ್ಷರಗಳನ್ನು ರಚಿಸ ಬೇಕು. ನಂತರ ತನ್ನ ಹೃದಯದಲ್ಲಿ ಇಪ್ಪತ್ನಾಲ್ಕು ದಳಗಳುಳ್ಳ ಒಂದು ಕಮಲವನ್ನು ಚಿಂತಿಸಿ, ಆ ಕಮಲದ ಮಧ್ಯ ಕರ್ಣಿಕೆ ಕೂಡಾ ಇಪ್ಪತ್ತ ಐದು ಸ್ಥಾನಗಳಲ್ಲಿ ಬಿಳಿವರ್ಣದಿಂದ ಶೋಭಿಸುವ, ವ್ಯಂಜನಾಕ್ಷರಗಳಾದ

ಕ-ಖ-ಗ-ಘ-ಙ, -ಚ-ಛ-ಜ-ಝ-ಞ-ಟ-ಠ-ಡ-ಢ-ಣ,-ತ-ಥ-ದ-ಧ-ನ, ಪ-ಫ-ಬ-ಭ-ಮ ಎಂಬ ಇಪ್ಪತ್ತೈದು ಅಕ್ಷರಗಳನ್ನು ಸ್ಥಾಪಿಸಿ. ಆ ಮೇಲೆ ತನ್ನ ಮುಖದಲ್ಲಿಯೇ ಎಂಟು ದಳಗಳ ಕಮಲವನ್ನು ರಚಿಸಿ, ಆ ಒಂದೊಂದು ದಳಗಳಲ್ಲಿ ಕ್ರಮವಾಗಿ ಹಳದಿ ವರ್ಣದ, ಯ-ರ-ಲ-ವ-ಶ-ಷ-ಸ-ಹ ಎಂಬ ಎಂಟು ಅಕ್ಷರಗಳನ್ನು ಧ್ಯಾಸಿಸಿ, ಆ ಕಮಲವು ಸುತ್ತು ತಿರುಗುತ್ತಿದೆಯೆಂದು ಧ್ಯಾನಿಸಬೇಕು. ಈ ರೀತಿ ಮೂರು ಕಡೆಯ ಮೂರು ಕಮಲಗಳನ್ನೂ ಅಕ್ಷರಗಳನ್ನೂ ಶ್ರದ್ಧೆಯಿಂದ ಧ್ಯಾನಿಸುತ್ತಿರಬೇಕು. ಈ ಅಕ್ಷರಗಳು ಶ್ರುತಜ್ಞಾನದ ಮೂಲ ಅಕ್ಷರಗಳಾಗಿವೆ. ಇದನ್ನೇ ಅಂದರೆ ಶ್ರೀ ಜಿನವಾಣಿಯನ್ನೇ ಧ್ಯಾನ ಮಾಡುತ್ತಿದ್ದೇನೆ ಎಂದು ಭಾವಿಸುತ್ತಿರಬೇಕು.

## ರೂಪಸ್ಥ ಧ್ಯಾನದ ಕ್ರಮ

"ಶ್ರೀ ಅರಹಂತ ಭಗವಾನ್" ಇವರ ಸ್ವರೂಪದಲ್ಲಿ ತನ್ಮಯನಾಗಿ ಧ್ಯಾನಿಸುವುದು "ರೂಪಸ್ಥ ಧ್ಯಾನ"ವೆಂದು ಹೆಸರು. ಇದರಂತೆಯೇ, "ವೃಷಭ" "ನೇಮಿ" "ಪಾರಿಶ್ವ" "ವರ್ಧಮಾನ" ಹಾಗೂ "ಸೀಮಂಧರ ಸ್ವಾಮಿ" ಮೊದಲಾದ ಯಾವುದೇ ಆಗಲಿ "ತೀರ್ಥಂಕರರ" ಸ್ವರೂಪವನ್ನು ಇದ್ದಕ್ಕಿದ್ದ ಹಾಗೆ ಭಾವಿಸುವುದೇ "ರೂಪಸ್ಥ ಧ್ಯಾನ" ಎಂದಾಗಿದೆ. (1) ಸಮವಸರಣ ಮಂಟಪದಲ್ಲಿ ಹನ್ನೆರಡು ಕೋಷ್ಠ(ಸಭೆ)ಗಳಿರುತ್ತವೆ. ಇವುಗಳಲ್ಲಿ ನಾಲ್ಕು ವಿಧದ ದೇವ-ದೇವಿಯರೂ, ಮುನಿಗಳೂ, ಆರ್ಯಿಕೆಯರೂ, ಮನುಷ್ಯ ಮತ್ತು ಪಶು ಇವರೆಲ್ಲಾ ಇರುತ್ತಾರೆ. ಇದರ ಮಧ್ಯ ಪ್ರದೇಶದಲ್ಲಿ ಮೂರು ಮೇಖಲೆ (ಅಂತಸ್ತು) ಮೇಲೆ ನಾಲ್ಕು ಕಡೆಗಳಲ್ಲಿ ಸಿಂಹಗಳು ಇರುತ್ತಾ, ಇವುಗಳ ಮಧ್ಯಪ್ರದೇಶದಲ್ಲಿ ಮೇಲೆ ಸಾವಿರದ ಎಂಟು ಎಸಳು (ದಳ) ಕಮಲವಿದ್ದು, ಈ ಕಮಲವನ್ನು ಸ್ಪರ್ಶ ಮಾಡದೆ ನಾಲ್ಕು ಅಂಗುಲಗಳ ಮೇಲೆ ಅಂತರಿಕ್ಷದಲ್ಲಿ "ಶ್ರೀ ಅರಹಂತ" ಅಥವಾ "ತೀರ್ಥಂಕರರು" ಪದ್ಮಾಸನದಲ್ಲಿ ವಿರಾಜಮಾನರಾಗಿ (ಕೂತುಕೊಂಡು) ಇರುವರು. (2) ಈ ಭಗವಂತರು ರಕ್ತ

ಮಾಂಸಾದಿಗಳಿಂದ ಅಂದರೆ ಏಳು ವಿಧದ ಧಾತುಗಳಿಂದ ರಹಿತವಾದ "ಪರಮೌದಾರಿಕ" ದೇಹವು ಕೋಟಿ ಸೂರ್ಯ ಚಂದ್ರರಿಗಿಂತಲೂ ಪ್ರಕಾಶಮಾನರಾಗಿ ಇರುತ್ತಾರೆ. (3) ಈ ಸ್ವಾಮಿಯು ಪರಮಶಾಂತ ಸ್ವರೂಪಮಗ್ನರಾಗಿ, ದೇಹದ ಪ್ರತಿಯೊಂದು ಭಾಗವೂ "ವೀತರಾಗ" ಮುದ್ರೆಯಿಂದ ಪ್ರಕಾಶ ಬೀರುತ್ತಿರುತ್ತಾರೆ. (4) ಈ ಅರಹಂತ - ವ - ತೀರ್ಥಂಕರರು ಹಸಿವೆ, ಬಾಯಾರಿಕೆ, ದುಃಖ, ವ್ಯಸನ, ಪ್ರೀತಿ, ದ್ವೇಷ, ಜನನ, ಮರಣ ಆದಿಯಾಗಿ ಹದಿನೆಂಟು ದೋಷಗಳಲ್ಲಿದ್ದವರಾಗಿರುತ್ತಾರೆ. (5) ಶ್ರೀ ಪರಮಾತ್ಮನಿಗೆ "ಜ್ಞಾನಾವರಣೀಯ" ಕರ್ಮವು ಸಂಪೂರ್ಣ ನಾಶವಾದುದರಿಂದ "ಅನಂತಜ್ಞಾನ"ವು ಪ್ರಕಟವಾಗಿ, ಇದರಿಂದ ಲೋಕಾ ಲೋಕಗಳ ಪ್ರತಿಯೊಂದು ವಸ್ತುಗಳ ಜ್ಞಾನವು ಪ್ರತಿಯೊಂದು ಸಮಯ ಗಳಲ್ಲಿಯೂ ತಿಳಿಯಲು ಶಕ್ತವಾಗಿದೆ. "ದರ್ಶನಾವರಣೀಯ ಕರ್ಮ"ದ ನಾಶದಿಂದ "ಅನಂತದರ್ಶನ" ತಲೆದೋರಿ ಇದರಿಂದ ಲೋಕಾಲೋಕ ಗಳಲ್ಲಿರುವ ಪ್ರತಿಯೊಂದು ವಸ್ತುಗಳನ್ನೂ ನೋಡಲು ಶಕ್ತಿಯುಳ್ಳದ್ದಾ ಗಿದೆ. "ಮೋಹನೀಯ ಕರ್ಮ"ದ ನಾಶದಿಂದಾಗಿ ಕ್ಷಾಯಿಕ ಸಮ್ಯ ಗ್ದರ್ಶನ - ವ - ಯಥಾಖ್ಯಾತ ಚಾರಿತ್ರ ಮತ್ತು ವೀತರಾಗತ್ವ ಪ್ರಕಟ ವಾಗಿರುತ್ತದೆ. "ಅಂತರಾಯ ಕರ್ಮ"ದ ನಾಶದಿಂದ ಅನಂತವೀರ್ಯ, ಅನಂತದಾನ, ಅನಂತಲಾಭ, ಅನಂತಭೋಗ, ಅನಂತ ಉಪಭೋಗಗಳು ಪ್ರಕಟವಾಗಿರುತ್ತವೆ. ಅಂದರೆ "ನವಕೇವಲ ಲಬ್ಧಿ" ವಿಭೂಷಿತರಾಗಿರು ತ್ತಾರೆ. "ಅನಂತಲಾಭ" ಈ ಶಕ್ತಿಯು ಪ್ರಕಟವಾಗಿರುವುದರಿಂದ ಪರ ಮಾತ್ಮನ ಪರಮೌದಾರಿಕ ದೇಹವನ್ನು ಪುಷ್ಟಿಗೊಳಿಸಲು "ಆಹಾರಕ" ವರ್ಗಣಾ ಎಂಬುದು ಶರೀರದಲ್ಲಿ ತನ್ನಿಂದ ತಾನೆ ಉತ್ಪತ್ತಿಯಾಗುತ್ತದೆ, ಅಂದರೆ ಇದಕ್ಕೆ ಬೇಕಾದ ಪೋಷಣೆಯು ಒದಗುತ್ತದೆ. ತಾತ್ಪರ್ಯ ವೇನೆಂದರೆ ಮಾನವನ ಹಾಗೆ ತಿನ್ನುವುದು ಕುಡಿಯುವುದು ಬೇಕಾಗಿಲ್ಲ ಮತ್ತು ಅದರ ಅಗತ್ಯವೇ ಇಲ್ಲ. (6) ಶ್ರೀ ಭಗವಂತನ ಸಾನಿಧ್ಯದಲ್ಲಿ ಎಂಟು ಪ್ರತಿಹಾರ್ಯಗಳು ಶೋಭಾಯಮಾನವಾಗಿರುತ್ತದೆ. (1) ಅತೀ ಮನೋಹರವಾದ ರತ್ನಮಯವಾಗಿರುವ "ಸಿಂಹಾಸನ" (2) ದೇಹದ ನಾಲ್ಕು ಕಡೆಗಳಲ್ಲಿಯೂ ಕೋಟಿಕೋಟಿ ಚಂದ್ರರ ಪ್ರಭೆಗಿಂತಲೂ

ಮಿಗಿಲಾದ "ಪ್ರಭಾಮಂಡಲ" (3) ಶಿರದ ಮೇಲ್ಗಡೆಯಲ್ಲಿ ಅನುಪಮ ಪ್ರಕಾಶವಾದ "ಮೂರು ಛತ್ರ" (ಸತ್ತಿಗೆ) (4) ಹಂಸಕ್ಕಿಂತಲೂ ಬಿಳಿದಾದ "ಎರಡು ಚಾಮರ"ಗಳನ್ನು ದೇವಗಣವು ಎರಡು ಕಡೆಗಳಲ್ಲಿಯೂ ಹಾಕುತ್ತಿರುವುದು (5) ದೇವತೆಗಳು ಸದಾಕಾಲವೂ ಕಲ್ಪವೃಕ್ಷಗಳ "ಮನೋಹರವಾದ ಪುಷ್ಪ"ಗಳನ್ನೂ ಭಗವಂತನ ಮೇಲೆ ಸುರಿಸುತ್ತಿರುವುದು (6) ಸ್ವಾಮಿಯು ಕೂತುಕೊಂಡಿರುವ ಸಿಂಹಾಸನವ ಬಳಿಯಲ್ಲಿ "ಅಶೋಕವೃಕ್ಷ" ಶೋಭಾಯಮಾನವಾಗಿರುವುದು (7) "ದುಂದುಭಿ"ಗಳ ಗಂಭೀರಧ್ವನಿ (8) ಎಲ್ಲಕ್ಕಿಂತ ಅತಿಶಯವಾದುದೇನೆಂದರೆ ಸಮವಸರಣದಲ್ಲಿರುವ ಪ್ರತಿಯೊಂದು ದೇವಾದಿ ಮಾನವ ಪಶುಗಳಿಗೂ ಅವರವರ ಭಾಷೆಯಲ್ಲಿಯೇ ತಿಳಿದುಕೊಳ್ಳುವ ಶಕ್ತಿಯುಳ್ಳ ಶ್ರೀ ಭಗವಂತನ ಮುಖಕಮಲದಿಂದ ಹೊರಡುತ್ತಿರುವ "ದಿವ್ಯಧ್ವನಿ"ಯು ಮಹಾಸ್ವಾಮಿಯಲ್ಲಿ ಸ್ವಾಭಾವಿಕವಾಗಿಯೇ ಇರುತ್ತದೆ ಎಂದು ಧ್ಯಾನಿಸುವುದು ರೂಪಸ್ಥಧ್ಯಾನವಾಗಿದೆ (9) ನಿಶ್ಚಯ ಸಮ್ಯಕ್ತ್ವ, ನಿಶ್ಚಯ ಸಮ್ಯಗ್ಜ್ಞಾನ, ನಿಶ್ಚಯ ಸಮ್ಯಕ್ಚಾರಿತ್ರದಿಂದೊಡಗೂಡಿಯೂ ಪರಮಾತ್ಮನು (ಅದ್ವೈತ) ಆತ್ಮ ಸ್ವಭಾವದಲ್ಲಿಯೇ ತಲ್ಲೀನನಾಗಿರುವನು. ಶ್ರೀ ಪರಮಾತ್ಮನಲ್ಲಿರುವ ಸುಗುಣ ಮತ್ತು ಶಾಸ್ತ್ರಗಳಿಂದಾಗಿ ಶ್ರೀ ಭಗವಂತನಿಗೆ ಈ ಕೆಳಗಿನ ಹೆಸರುಗಳಿವೆ...

(1) ಕಾಮನಾಶಕ (2) ಅಜನ್ಮಾ (3) ಅವ್ಯಕ್ತ (4) ಅತೀಂದ್ರಿಯ (5) ಜಗತ್‌ವಂದ್ಯ (6) ಯೋಗಿಗಮ್ಯ (7) ಮಹೇಶ್ವರ (8) ಜ್ಯೋತಿರ್ಮಯ (9) ಅನಾದ್ಯನಂತ (10) ಸರ್ವರಕ್ಷಕ (11) ಯೋಗೀಶ್ವರ (12) ಜಗದ್ಗುರು (13) ಅನಂತ (14) ಅಚ್ಯುತ (15) ಶಾಂತ (16) ತೇಜಸ್ವಿ (17) ಸನ್ಮತಿ (18) ಸುಗತ (19) ಸಿದ್ಧ (20) ಜಗತ್‌ಶ್ರೇಷ್ಠ (21) ಪಿತಾಮಹ (22) ಮಹಾವೀರ (23) ಮುನಿಶ್ರೇಷ್ಠ (24) ಪವಿತ್ರ (25) ಪರಮಾಕ್ಷರ (26) ಸರ್ವಜ್ಞ (27) ಪರಮದಾತ (28) ಸರ್ವಹಿತೈಷಿ (29) ವರ್ಧಮಾನ (30) ನಿರಾಮಯ (31) ನಿತ್ಯ (32) ಅವ್ಯಯ (33) ಪರಿಪೂರ್ಣ (34) ಪುರಾತನ (35) ಸ್ವಯಂಭೂ (36) ಹಿತೋಪದೇಶಿ (37) ವೀತರಾಗ (38) ನಿರಂಜನ (39) ನಿರ್ಮಲ

(40) ಪರಮಗಂಭೀರ (41) ಪರಮೇಶ್ವರ (42) ಪರಮತೃಪ್ತ (43) ಪರಮಾಮೃತಪಾನಕರ್ತಾ (44) ಅವ್ಯಯ ಬಾಧಾ (45) ನಿಷ್ಕಲಂಕ (46) ನಿಜಾನಂದಿ (47) ನಿರಾಕುಲ (48) ನಿಷ್ಪೃಹ (49) ದೇವಾದಿದೇವ (50) ಮಹಾಶಂಕರ (51) ಪರಮಬ್ರಹ್ಮ (52) ಪರಮಾತ್ಮ (53) ಪುರುಷೋತ್ತಮ (54) ಪರಮಬುದ್ಧ (55) ಅಮರ (56) ಅಶರಣಶರಣ (57) ಗುಣಸಮುದ್ರ (58) ಶಿವನಾರಿಸಮ್ಮೋಹಿ (59) ಪರಮಸಮ್ಯಗ್ದೃಷ್ಟಿ (60) ಆತ್ಮಜ್ಞ (61) ಶುಕ್ಲಧ್ಯಾನಿ (62) ಸಕಲತತ್ವಜ್ಞಾನಿ (63) ತೀರ್ಥಂಕರ (64) ಅನುಪಮ (65) ಅನಂತ ಲೋಕಾವಲೋಕನ ಶಕ್ತಿಧಾರಿ (66) ಪರಮ ಪುರುಷಾರ್ಥಿ (67) ಕರ್ಮಪರ್ವತ ಚೂರಕ ವಜ್ರ (68) ವಿಶ್ವಜ್ಞಾತಾ (69) ನಿರಾವರಣ (70) ಸ್ವರೂಪಶಕ್ತ (71) ಸಕಲಾಗಮ ಉಪದೇಶಕರ್ತ (72) ಪರಮಕೃತಕೃತ್ಯ (73) ಪರಮ ಸಂಯಮಿ (74) ಪರಮಆಪ್ತ (75) ಸ್ನಾತಕನಿಗ್ರಂಥ (76) ಸಯೋಗಿಜಿನ (77) ಪರಮನಿರ್ಜರಾರೂಢ (78) ಪರಮ ಸಂವರಪತಿ (79) ಆಸ್ರವನಿರ್ವಾರಕ (80) ಶುದ್ಧಜೀವ (81) ಗಣಧರ ನಾಯಕ (82) ಮುನಿಗಣಶ್ರೇಷ್ಠ (83) ತತ್ವವೇತ್ತ (84) ಆತ್ಮರಮಿ (85) ಮುಕ್ತಿನಾರಿಭರ್ತಾ (86) ಪರಮವೈರಾಗಿ (87) ಪರಮಾನಂದಿ (88) ಪರಮತಪಸ್ವಿ (89) ಪರಮಕ್ಷಮಾದಾನ (90) ಪರಮಸತ್ಯಧರ್ಮಾರೂಢ (91) ಪರಮಶುಚಿ (92) ಪರಮತ್ಯಾಗಿ (93) ಅದ್ಭುತ ಬ್ರಹ್ಮಚಾರಿ (94) ಶುದ್ಧೋಪಯೋಗಿ (95) ನಿರಾಲಂಬ (96) ಪರಮಸ್ವತಂತ್ರ (97) ನಿರ್ವೈರ (98) ನಿರ್ವಿಕಾರಾ (99) ಆತ್ಮದರ್ಶಿ (100) ಮಹಾಋಷಿ ಇತ್ಯಾದಿ ಹೆಸರುಗಳಿರುತ್ತವೆಯೆಂದು ಚಿಂತಿಸಿ ಅವುಗಳ ಅರ್ಥವನ್ನೂ ಗ್ರಹಿಸಿಕೊಳ್ಳಬೇಕು. ಹೀಗೆ ವಿಚಾರ ಮಾಡುತ್ತ ಆ ಪರಮಾತ್ಮ ವೀತರಾಗ ಸ್ವರೂಪವನ್ನು ತನ್ನ ಆತ್ಮನಲ್ಲಿ ಅಂಟುವಂತೆಯೇ ಧ್ಯಾನಿಸಿ ಕೊನೆಗೆ ಆ ವೀತರಾಗ ಮೂರ್ತಿಯೇ ತನ್ನ ಆತ್ಮನೆಂದು ಭಾವಿಸುತ್ತಾ ಬರುವಾಗ ತಾನು ಬೇರೆ, ಪರಮಾತ್ಮನು ಬೇರೆ ಎಂಬ ದ್ವೈತಭಾವವು ಅಳಿದು, ತಾನೇ ಶುದ್ಧಾತ್ಮನೂ, ಪರಮಾತ್ಮನೂ, ಪರಮವೀತರಾಗನೂ ತಾನೇ ಎಂಬ

ಅದ್ವೈತಭಾವಕ್ಕೆ ಮುಟ್ಟಿ ಶ್ರೀ ಅರಹಂತನೂ ಭಗವಂತನೂ ಸರ್ವಜ್ಞನೂ ತಾನೇ ಎಂದು ನಿರ್ಣಯವಾದಾಗ ಸಕಲ ಕರ್ಮಗಳೂ ಕ್ಷಯವಾಗಿ ಮೋಕ್ಷಕ್ಕೆ ಅರ್ಹನಾಗುವನು. ಈ ರೀತಿಯ ಅಭ್ಯಾಸಕ್ಕೆ ರೂಪಸ್ಥಧ್ಯಾನ ವೆಂದು ಹೆಸರು ..

## ರೂಪಾತೀತ ಧ್ಯಾನದ ಕ್ರಮ

ಈ ಧ್ಯಾನಾಭ್ಯಾಸದಲ್ಲಿ ಸಿದ್ಧರ ಸ್ವರೂಪ ಮತ್ತು ಗುಣಗಳನ್ನು ಚಿಂತಿಸುತ್ತಾ ಚಿಂತಿಸುತ್ತಾ ತಾನು ಅಂದರೆ ತನ್ನ ಆತ್ಮನು ಕೂಡಾ ಸಿದ್ಧ ನಾಗಿಯೇ ಇರುತ್ತಾನೆ ಎಂಬಲ್ಲಿ ವರೇಗೆ ಮುಟ್ಟಬೇಕು. ಶ್ರೀ ಸಿದ್ಧ ಪರಮೇಷ್ಠಿ ಸ್ವರೂಪ ಹೇಗೆಂದರೆ:- ಶ್ರೀ ಸಿದ್ಧರು ಅಮೂರ್ತಿ (ದೇಹ ರಹಿತ) ಶುದ್ಧ ಚೈತನ್ಯನೂ, ಪುರುಷಾಕಾರನೂ, ಕೃತಕೃತ್ಯನೂ, ಪರಮ ಶಾಂತನೂ, ನಿಷ್ಕಲಂಕನೂ, ಪರಮಶುದ್ಧನೂ, ಎಂಟು ಕರ್ಮಗಳಿಂದ ಬಿಡುಗಡೆ ಹೊಂದಿದವನೂ, ಪರಮವೀತರಾಗನೂ, ಚಿದಾನಂದ ರೂಪನೂ, ಸಮ್ಯಕ್ತ್ವಾದಿ ಎಂಟು ಸುಗುಣಗಳಿಂದ ಕೂಡಿದವನೂ, ನಿರ್ಲೇಪನೂ, ಸದಾಸಂತೋಷಿಯೂ, ಸ್ವರೂಪಮಗ್ನನೂ, ಸ್ಫಟಿಕದ ಮಣಿಯಂತೆ ಇರುವವನೂ, ನಿರಂಜನನೂ, ನಿರ್ವಿಕಾರನೂ, ಲೋಕದ ಮೇಲ್ಭಾಗದ ತುದಿಯಲ್ಲಿರುವವನೂ, ಇತ್ಯಾದಿ ಸದ್ಗುಣಯುತ ಸ್ವರೂಪ ವನ್ನು ಚಿಂತಿಸುತ್ತಾ ಆ ಸಿದ್ಧಪರಮೇಷ್ಠಿಯ ಹಾಗೆಯೇ ನಾನೂ ಕೂಡಾ ಪರಮಾತ್ಮನಾಗಿದ್ದೇನೆ, ಸರ್ವಜ್ಞನಾಗಿರುವೆನು, ಸಿದ್ಧನಾಗಿರುವೆನು, ಕೃತಕೃತ್ಯನೂ ನಾನೇ, ಪರಮಾನಂದ ಭೋಗಿ, ನಿರಂಜನ, ಪರಮ ವೀತರಾಗ ಶಿವ, ಪರಬ್ರಹ್ಮ ಕರ್ಮರಹಿತನೂ ನಾನೇ ಎಂದು ಪದೇ ಪದೇ ಧ್ಯಾನಿಸುತ್ತಾ ತನ್ನಲ್ಲಿ ತಾನೇ ಲೀನನಾಗಿ ಭಾವಿಸುತ್ತಿರಬೇಕು. ಪರವಸ್ತು ಚಿಂತನೆಯನ್ನು ಬಿಟ್ಟು ತನ್ನನ್ನೇ ಪರಮಾತ್ಮ, ಸಿದ್ಧನೆಂದು ತಿಳಿದು, ಧ್ಯಾನಿಸುತ್ತಿರುವುದೇ ರೂಪಾತೀತ ಧ್ಯಾನಾಭ್ಯಾಸವಾಗಿದೆ...

ಧ್ಯಾನಾಭ್ಯಾಸಿಯು ಈ ಮೊದಲು ಹೇಳಿದ ಪ್ರಕಾರ ಪದಸ್ಥ-ಪಿಂಡಸ್ಥ-ರೂಪಸ್ಥ-ರೂಪಾತೀತ ಈ ನಾಲ್ಕು ರೀತಿಯ ಅಭ್ಯಾಸಗಳಲ್ಲಿ

ಮೊದಲಾಗಿ ಒಂದೊಂದನ್ನೇ ಅಭ್ಯಾಸಿಸಿ, ಅದು ಸಾಧ್ಯವಾಯಿತೆಂದರೆ ಇನ್ನೊಂದನ್ನೂ ಹಾಗೆಯೇ ಬೇರೊಂದನ್ನೂ ಕ್ರಮಾಕ್ರಮವಾಗಿ ಅಭ್ಯಾಸ ಮಾಡುತ್ತಾಹೋಗಬೇಕು. ಈ ಮೊದಲು ಹೇಳಿದಂತೆ ಧ್ಯಾನಾಭ್ಯಾಸಕ್ಕೆ ಯೋಗ್ಯವಾದ ಕಾಲ, ಆಸನಾದಿಗಳಿಂದ ಆರಂಭಿಸಿ, ಕೊನೆಯ ರೂಪಾತೀತ ಧ್ಯಾನವನ್ನೂ ಅಭ್ಯಾಸ ಮಾಡುತ್ತಾ ಬಂದರೆ ಇದರಿಂದ ಪರಮಾನಂದ ಪ್ರಾಪ್ತಿಯಾಗುವುದಲ್ಲದೆ ಕರ್ಮಗಳ ನಿರ್ಜರೆಯೂ ಆಗುತ್ತದೆ. ಈ ರೀತಿಯ ನಾಲ್ಕು "ಧ್ಯಾನಸ್ವರೂಪ"ಗಳಿದ್ದರೂ ಈಗಿನ ಕಾಲದ ದುರ್ಲಭ ಹೃದಯವುಳ್ಳವರಿಗೆ ಮೇಲೆ ಬರೆದ "ಪಿಂಡಸ್ಥಧ್ಯಾನ" ಹೆಚ್ಚಿನ ಸುಲಭ ಸಾಧನವಾಗಿದೆ.

## ಮಂತ್ರರಾಜ — "ಹ್ರ್ಂ"

ಈ "ಹ್ರ್ಂ" ಬೀಜಾಕ್ಷರಕ್ಕೆ ಮಂತ್ರರಾಜ ಎಂದು ಹೆಸರಾಗಿದೆ. ಈ ಬೀಜಾಕ್ಷರವು ಸಾಕ್ಷಾತ್ ಪರಮಾತ್ಮನ ಹಾಗೂ ಇಪ್ಪತ್ತನಾಲ್ಕು ತೀರ್ಥಂಕರರ ಸ್ಮರಣೆ ಮಾಡಲು ಮುಖ್ಯ ಸಾಧನವಾದ, ಅಪರಿಮಿತ ಶಕ್ತಿಯುತವಾದ ಮಂತ್ರವಾಗಿದೆ. ಈ "ಹ್ರ್ಂ" ಎಂಬುದನ್ನು ಧ್ಯಾನಿಸುತ್ತಾ ಈ ಮಂತ್ರಾಕ್ಷರದಲ್ಲಿಯ ಮಹಾಪ್ರಕಾಶವಾದ ಶಕ್ತಿಯನ್ನೂ ಒಟ್ಟುಗೂಡಿಸಿ ಧ್ಯಾನಿಸಬೇಕು. ಈ ಮಹಾಪ್ರಕಾಶವು ಬಾಯಿ(ಮುಖ) ಒಳಗೆ ಪ್ರವೇಶಿಸಿ, ಅಮೃತಪಾನ ಮಾಡಿದಂತಾಗಿ ಆ ಪ್ರಕಾಶ ಕಿರಣಗಳು ಎರಡು ಕಣ್ಣುಗಳಿಂದ ಹೊರಟು ತಲೆ ಮೇಲೆ ಕೂದಲುಗಳಲ್ಲಿ ಪ್ರವೇಶಿಸಿ, ಅಲ್ಲಿಂದ ಶಿರಸ್ಸಿನ ಮೇಲೆ ಹೊರಟು ಅಲ್ಲಿಂದಲೂ ಮುಂದೆ ಆ ಮಹಾತೇಜವು ಚಂದ್ರ-ಸೂರ್ಯರ ವಿಮಾನಗಳನ್ನೂ ಹಿಂದಿಕ್ಕೆದಾಟಿ ಸ್ವರ್ಗಾದಿ ಸ್ಥಾನಗಳನ್ನೂ ದಾಟಿ ಮುಂದೆ ಮೋಕ್ಷ ಸ್ಥಾನಕ್ಕೆ ಸೇರುತ್ತದೆ ಎಂದು ಭಾವಿಸಬೇಕು. ಅಂದರೆ ಧ್ಯಾನಿಸಬೇಕು...

ಮಂತ್ರರಾಜ "ಹ್ರ್ಂ" ಎಂಬುದನ್ನು ಕೆಲವರು "ಹರ್ಂ" ಎಂದು ಹೇಳುವವರೂ ಇದ್ದಾರೆ. ಆದರೆ "ಜ್ಞಾನಾರ್ಣವ ಗ್ರಂಥ"ದ ಪುಟ 389ರಲ್ಲಿ ಈ ಕೆಳಗಿನಂತಿದೆ.

ಶ್ಲೋಕ:- ಅಥಮಂತ್ರ ಪದಾಧೀಶಂ ಸರ್ವತತ್ತ್ವೈಕ ನಾಯಕಂ ॥
ಆದಿಮಧ್ಯಾಂತ ಭೇದೇನ ಸ್ವರವ್ಯಂಜನ ಸಂಭವಂ ॥
ಊರ್ಧ್ವಾಧೋರೇಫಸಂರುದ್ಧಂ ಸಪರಂ ಬಿಂದು ಲಾಂಛಿತಂ ॥
ಅನಾಹತಯುತಂ ತತ್ತ್ವಂ ಮಂತ್ರರಾಜ ಪ್ರಚಕ್ಷತೇ ॥
(ಜ್ಞಾನಾರ್ಣವ ಪುಟ 389)

ಅರ್ಥ:- ಸಮಸ್ತಮಂತ್ರಪದಗಳಿಗೆ ಸ್ವಾಮಿಯೂ, ಪ್ರತಿಯೊಂದು ತತ್ತ್ವಗಳಿಗೆ ನಾಯಕನೂ, ಆದಿ, ಮಧ್ಯ, ಅಂತ್ಯ, ಭೇದದಿಂದ ಮತ್ತು ಸ್ವರವ್ಯಂಜನಗಳಿಂದ ಉತ್ಪನ್ನವಾಗಿರುವುದು ಮೇಲೆ ಮತ್ತು ಕೆಳಗೆ ರೇಫ(ರ್)ದಿಂದ ಪ್ರಕಾಶಮಾನವಾಗಿ ಪ್ರಜ್ವಲಿಸುತ್ತಿರುವುದೂ, ಹಾಗೂ ಬಿಂದು (ಂ) ಚಿಹ್ನೆಯುಳ್ಳುದೂ ಅನಾಹತ ಸಹಿತವೂ ಆದ "ಹಕಾರ" "ಹ್ರ್ರಂ" ಎಂಬ ಬೀಜಾಕ್ಷರವೇ "ಮಂತ್ರರಾಜ"ನೆಂದೆನಿಸುವುದು...

ಶ್ಲೋಕ:- ಬುದ್ಧಃ ಕೈಶ್ಚಿದ್ಧರಿಃ ಕೈಶ್ಚಿದ್ಧಜಃ ಕೈಶ್ಚಿನ್ಮಹೇಶ್ವರಃ ॥
ಶಿವಃ ಸಾರ್ವಸ್ತಥೈಶಾನಃ ಸೋಽಯಂ ವರ್ಣಃ ಪ್ರಕೀರ್ತಿತಃ॥
(ಜ್ಞಾನಾರ್ಣವ ಪುಟ 390)

ಮೇಲಿನ ಮಂತ್ರರಾಜನೆನಿಸಿದ "ಹ್ರ್ರಂ" ಎಂಬುದನ್ನೇ ಕೆಲವರು "ಬುದ್ಧ"ನೆಂದೂ ಕೆಲವರು "ಹರಿ" ಎಂದೂ ಹಾಗೆಯೇ ಕೆಲವರು "ಬ್ರಹ್ಮ" "ಮಹೇಶ್ವರ" "ಸಾರ್ವ" "ಶಿವ" ಮತ್ತು "ಈಶಾನ" ಎಂಬ ಸ್ವರೂಪಗಳಿಂದ ಧ್ಯಾನಿಸುತ್ತಾರೆ.

## ಪ್ರಣವ ಮಂತ್ರ "ಓಂ"

"ಓಂ" ಎಂಬ ಬೀಜಾಕ್ಷರ ಮಂತ್ರವು ಅತೀ ಉತ್ಕೃಷ್ಟತರವಾದ ಮಂತ್ರವಾಗಿರುತ್ತದೆ. ಇದರಲ್ಲಿ ಶ್ರೀ ಪಂಚಪರಮೇಷ್ಠಿ ವಾಚಕವಾದ ಪ್ರತಿಯೊಂದು ಅಕ್ಷರಗಳೂ ಅಡಕವಾಗಿರುತ್ತದೆ. ತನ್ನ ಹೃದಯ ಮಧ್ಯದಲ್ಲಿ ಎಂಟು ದಳಗಳುಳ್ಳ ಕಮಲವನ್ನು ರಚಿಸಿ ಮಧ್ಯಕರ್ಣಿಕೆಯಲ್ಲಿ "ಓಂ" ಎಂಬ ಬೀಜಾಕ್ಷರವು ಪೂರ್ಣಿಮ ಚಂದ್ರನಂತೆ ಪ್ರಕಾಶಿಸುವುದು ಎಂದು ಭಾವಿಸುತ್ತಾ ಎಂಟು ದಳಗಳ ಪೈಕಿ ಮೂರು

ದಳಗಳಲ್ಲಿ ಹದಿನಾರು ಅ-ಆ ಮೊದಲಾದ ಅಕ್ಷರಗಳನ್ನೂ, ಉಳಿದ ಐದು ದಳಗಳಲ್ಲಿ ಕ-ಖ ಮೊದಲಾದ ವ್ಯಂಜನಾಕ್ಷರಗಳನ್ನೂ ಧ್ಯಾನಿಸುತ್ತಾ "ಓಂ" ಇದರ ಪ್ರಕಾಶವು ಹೃದಯದ ಕೆಳಗೆ ಮೇಲೆ ಎಲ್ಲಾ ಕಡೆಗಳಲ್ಲಿಯೂ ಪ್ರಕಾಶ ಬೀರುತ್ತಿದೆ ಎಂದು ಧ್ಯಾನಿಸಬೇಕು. ಮತ್ತು ಈ "ಓಂ" ಬೀಜಾಕ್ಷರದ ಮಧ್ಯೆ ಶ್ರೀ ಪಂಚಪರಮೇಷ್ಠಿಗಳ ಸ್ವರೂಪಗಳನ್ನೂ, ಅವರ ಗುಣಗಳನ್ನೂ ಚಿಂತಿಸಿ, ಧ್ಯಾನಿಸುತ್ತಿರಬೇಕು.

## ಮಹಾಮಂಗಲ ಣಮೋಕಾರ ಮಂತ್ರ

ತನ್ನ ಹೃದಯದಲ್ಲಿ ಎಂಟು ದಳಗಳುಳ್ಳ ಕಮಲವನ್ನು ರಚಿಸಿ, ಅದರ ಮಧ್ಯೆ ಕರ್ಣಿಕೆಯಲ್ಲಿ "ಣಮೋ ಅರಹಂತಾಣಂ" ಎಂಬ ಮಂತ್ರವೂ ಮತ್ತು ಇದರ ನಾಲ್ಕು ದಿಕ್ಕುಗಳ ಪೈಕಿ ಪೂರ್ವದಿಕ್ಕಿನ ದಳದಲ್ಲಿ "ಣಮೋ ಸಿದ್ಧಾಣಂ" ಎಂಬ ಮಂತ್ರವೂ, ಪಶ್ಚಿಮ ದಿಕ್ಕಿನ ದಳದಲ್ಲಿ "ಣಮೋ ಆಯಿರಿಯಾಣಂ" ಎಂಬ ಮಂತ್ರವೂ, ಉತ್ತರ ದಿಕ್ಕಿನ ದಳದಲ್ಲಿ "ಣಮೋ ಉವಜ್ಝಾಯಾಣಂ" ಎಂಬ ಮಂತ್ರವೂ, ದಕ್ಷಿಣ ದಿಕ್ಕಿನ ದಳದಲ್ಲಿ "ಣಮೋ ಲೋಏ ಸವ್ವ ಸಾಹೂಣಂ" ಎಂಬ ಮಂತ್ರವೂ ಇರುತ್ತದೆ ಎಂದು ಧ್ಯಾನಿಸಬೇಕು. ಹಾಗೆಯೇ ಉಳಿದ ದಿಕ್ಕುಗಳಲ್ಲಿ "ಸಮ್ಯಗ್ದರ್ಶನಾಯ ನಮಃ" "ಸಮ್ಯಗ್ಜ್ಞಾನಾಯ ನಮಃ" "ಸಮ್ಯಕ್ಚಾರಿತ್ರಾಯ ನಮಃ" "ಸಮ್ಯಗ್ತಪಸೇ ನಮಃ" ಇವುಗಳನ್ನು ಚಿಂತಿಸಿ ಧ್ಯಾನಿಸಬೇಕು. ಹೀಗೆ ಮಾಡುತ್ತಿರುವಾಗ ಈ ಮಂತ್ರಗಳ ಭಾವಾರ್ಥಗಳನ್ನೂ ಧ್ಯಾನಿಸುತ್ತಿರಬೇಕು.

## ಶ್ರೀ ಪಂಚಪರಮೇಷ್ಠಿ ಧ್ಯಾನ

ಅ-ಸಿ-ಆ-ಉ-ಸಾ, ಈ ಐದು ಅಕ್ಷರಗಳು ಶ್ರೀ ಪಂಚಪರಮೇಷ್ಠಿಗಳ ಪ್ರಥಮ ಅಕ್ಷರಗಳಾಗಿರುತ್ತವೆ. ಈ ದೇದೀಪ್ಯಮಾನ ಹಾಗೂ ಪ್ರಕಾಶಯುತವಾದ ಐದು ಅಕ್ಷರಗಳನ್ನು ಐದು ಕಡೆಯಿರುವ ಐದು

ಕಮಲಗಳಲ್ಲಿ, ಅಂದರೆ ನಾಭಿಕಮಲದ ಮಧ್ಯದಲ್ಲಿ "ಅ" ಎಂಬುದನ್ನೂ, ಮಸ್ತಕ(ಶಿರ) ಕಮಲದಲ್ಲಿ "ಸಿ" ಎಂಬುದನ್ನೂ, ಕಂಠ (ಕುತ್ತಿಗೆ) ಪ್ರದೇಶದ ಕಮಲದಲ್ಲಿ "ಆ" ಎಂಬುದನ್ನೂ, ಹೃದಯ ಕಮಲದಲ್ಲಿ "ಉ" ಎಂಬುದನ್ನೂ, ಮುಖಕಮಲದಲ್ಲಿ "ಸಾ" ಎಂಬ ಮಂತ್ರಾಕ್ಷರವನ್ನೂ ಸ್ಥಾಪಿಸಿ ಧ್ಯಾನಿಸಬೇಕು. ಈ ಎಲ್ಲಾ ರೀತಿಯ ಅಭ್ಯಾಸಗಳು "ಪದಸ್ಥ ಧ್ಯಾನ"ದ ಕ್ರಮಗಳಾಗಿವೆ. ಈ ಎಲ್ಲಾ ಅಭ್ಯಾಸವು "ಧರ್ಮಧ್ಯಾನ"ದ ಸ್ವರೂಪವಾಗಿದೆ. ಈ ರೀತಿಯ ಧ್ಯಾನಾಭ್ಯಾಸದಿಂದ ಕರ್ಮಗಳು ಕ್ಷಯವಾಗುತ್ತಾ ನಿತ್ಯಸುಖ (ಮೋಕ್ಷ)ಕ್ಕೆ ದಾರಿಯಾಗುವುದು.

## ಧ್ಯಾನದ ಸುಲಭ ಸಾಧನ

ಹಟಯೋಗ ತತ್ವಜ್ಞಾನದ ಬೆಳಕಿನಲ್ಲಿ "ತ್ರಾಟಕ್" ಎಂಬುದು ಷಟ್ಕರ್ಮಗಳಲ್ಲಿ ಒಂದಾಗಿದೆ. ರಾಜಯೋಗ ಮತ್ತು ಜ್ಞಾನಯೋಗಗಳಲ್ಲಿ ಈ ತ್ರಾಟಕ್ ಎಂಬುದು ಬಲುಮುಖ್ಯ ಸಾಧನವಾಗಿರುವುದು. ಇದು ಸಂಕಲ್ಪ ಶಕ್ತಿಯ ತಳಹದಿಯಲ್ಲಿರುವುದು, ಇದು ಸಾಧಕರ ಪ್ರಥಮ ಸಾಧನವಾಗಿದೆ.

ಜ್ಞಾನಿಯು ತನ್ನ ಆಸಕ್ತಿಯನ್ನು ಗಹನ ವಿಚಾರಗಳಾದ "ಅಹಂ ಬ್ರಹ್ಮಸ್ಮಿ" ಅಂದರೆ ನಾನು ಪರಮಾತ್ಮ ಸ್ವರೂಪನು, ನಾನು ಪವಿತ್ರ ಸ್ವರೂಪನು, ನಾನು ಅನಂತಶಕ್ತಿ ಸ್ವರೂಪನು ಎಂದು ತಿಳಿದು ಏಕಾಗ್ರತೆಯನ್ನಿರಿಸುತ್ತಾನೆ. ಅಲ್ಪ ಜ್ಞಾನಿಗಳಿಗೆ ಗೂಢ ವಿಷಯಗಳ ಮೇಲೆ ಏಕಾಗ್ರತೆಯನ್ನಿರಿಸುವುದೆಂದರೆ ಅತ್ಯಂತ ಕಠಿಣವಾಗಿರುತ್ತದೆ. ಆದ ಕಾರಣ ಪ್ರಥಮದಲ್ಲಿ ಸಾಕಾರದಲ್ಲಿ ಅಂದರೆ ಲಘುತರವಾದ ವಸ್ತುವಿನಲ್ಲಿ ಏಕಾಗ್ರತೆಯನ್ನಿರಿಸಬೇಕು.

ಆರಂಭದಲ್ಲಿ ನಮ್ಮ ಇಷ್ಟದೇವ-ದೇವಿಯರ ಚಿತ್ರವನ್ನು ನಮ್ಮ ಮುಂದೆ ಇರಿಸಿಕೊಳ್ಳಬೇಕು. ಉದಾಹರಣೆಗಾಗಿ:- ಶ್ರೀ ಪದ್ಮಾವತಿ ದೇವಿಯ ಚಿತ್ರ ಎದುರಿಗೆ ಎಂದು ಭಾವಿಸೋಣ. ಅಭ್ಯಾಸ ಕ್ರಮ

ಹೇಗೆಂದರೆ:— ಮನಸ್ಸನ್ನು ಮೊದಲಾಗಿ ಆ ದೇವಿಯ ಪಾದಗಳಲ್ಲಿ ಐಕ್ಯಗೊಳಿಸಬೇಕು. ಆ ಬಳಿಕ ಪಾದಗಳ ಅಡಿಯಲ್ಲಿರುವ ಕಮಲದಲ್ಲಿ, ಆ ಬಳಿಕ ಉಟ್ಟಿರುವ ಬಣ್ಣದ ವಸ್ತ್ರದ ಮೇಲೆ, ಆ ಮೇಲೆ ಚಿನ್ನದ ಹಾರಗಳ ಮೇಲೆ, ಕಿವಿಯ ವಜ್ರದೋಲೆ ಮೇಲೆ, ಆ ಮೇಲೆ ಮುಖ, ನಂತರ ಕಿರೀಟ, ಹಾಗೆಯೇ ಕೈಗಳಲ್ಲಿರುವ ಬಳೆ, ವಂಕಿಗಳ ಮೇಲೆ, ಆ ಬಳಿಕ ಕ್ರಮವಾಗಿ ಧರಿಸಿರುವ ಅಭಯಹಸ್ತ-ಪಾಶ-ಅಂಕುಶ-ಫಲಗಳ ಕಡೆಗೆ ಕೊನೆಗೆ ಪುನಃ ಅನುಕ್ರಮವಾಗಿ ಪಾದಗಳ ಮೇಲೆ ದೃಷ್ಟಿಯನ್ನಿರಿಸಿ ಹಿಂದಿನಂತೆಯೇ ಮೇಲ್ಕಡೆಗೆ ದೃಷ್ಟಿಯನ್ನು ಕ್ರಮವಾಗಿ ಏರಿಸುತ್ತಾ ಹೋಗಬೇಕು. ಇದೇ ರೀತಿ ಮತ್ತೂ ಮತ್ತೂ ಅಭ್ಯಾಸ ಮಾಡುತ್ತಾ ಬರಬೇಕು. ಒಂದು ವೇಳೆ ಈ ಮಧ್ಯೆ ಮನಸ್ಸು ವಿಚಲಿತವಾದರೆ ಅದನ್ನು ಪ್ರಯತ್ನದಿಂದ ಪುನಃ ಹಿಂದಿನ ಸ್ಥಾನದಲ್ಲಿಯೇ ನೆಲೆಗೊಳಿಸಲು ಪ್ರಯತ್ನಿಸಬೇಕು.

## ಇನ್ನೊಂದು ರೀತಿಯ ಸುಲಭ ಸಾಧನ

ಪ್ರಥಮವಾಗಿ ಆಸನದಲ್ಲಿ ಕುಳಿತು ಎದುರಿನ ಗೋಡೆಯಲ್ಲಿ ಒಂದು ಕಪ್ಪು ಚುಕ್ಕಿಯನ್ನು ಹಾಕಿ "ತ್ರಾಟಕ"ವನ್ನು ಹತ್ತು ನಿಮಿಷಗಳ ತನಕ ಮಾಡಬಹುದು. ಕ್ರಮೇಣ ಸಮಯವನ್ನು ಹೆಚ್ಚಿಸಬಹುದು. ಕಣ್ಣಿನ ರೆಪ್ಪೆಯನ್ನು ಅಲುಗಾಡಿಸದೆ ಆ ಕಪ್ಪು ಚುಕ್ಕಿ (ಬೊಟ್ಟು) ಇದ್ದ ಸ್ಥಳವನ್ನೇ ನೋಡುತ್ತಿರಬೇಕು. ಈ ಸಮಯ ಕೈಗಳ ಹೆಬ್ಬೆಟ್ಟುಗಳಿಂದ ಎರಡು ಕಿವಿಗಳನ್ನು ಮುಚ್ಚಿ ಹೃದಯಾಕಾಶದಿಂದ ಕಿವಿಗಳ ಮೂಲಕ ಕೇಳಿಬರುವ ಅನಾಹತ ಧ್ವನಿಯ ಕಡೆಗೆ ಏಕಾಗ್ರತೆಯನ್ನಿರಿಸಬೇಕು. ಇದು ಲಯಯೋಗದ ವಿಧಾನ. ಇದರಂತೆಯೇ ಎದುರಿಗಿರುವ ದೇವ ದೇವಿಯರ ಮೂರ್ತಿ ಕಡೆಗೆ ಮನಸ್ಸನ್ನು ದತ್ತಚಿತ್ತಗೊಳಿಸಬಹುದು. ಈ "ತ್ರಾಟಕ್" ಅಭ್ಯಾಸವು ಅಪಾರ ಶಕ್ತಿಯನ್ನುಂಟುಮಾಡುವುದಲ್ಲದೆ ಕಣ್ಣುಗಳ ರೋಗಗಳನ್ನೆಲ್ಲಾ ನಿವಾರಿಸಿ ದಿವ್ಯದೃಷ್ಟಿಯನ್ನಿರಿಸುತ್ತದೆ.

## ಏಕಾಗ್ರತೆ - ಅಭ್ಯಾಸ

ನಮ್ಮ ಮನಸ್ಸನ್ನು ದೇಹದ ಹೊರಗಿನ ಅಥವಾ ಒಳಗಿನ ಯಾವುದಾದರೂ ವಸ್ತುವಿನಲ್ಲಿ ಏಕಾಗ್ರತೆಯನ್ನಿರಿಸಬೇಕು. ಅಲ್ಲಿಯೇ ಸ್ವಲ್ಪ ಹೊತ್ತಿನ ತನಕ ಸ್ಥಿರಗೊಳಿಸಬೇಕು. ಇದೇ ಏಕಾಗ್ರತೆ. ಇದನ್ನು ನಾವು ಪ್ರತಿನಿತ್ಯವೂ ಅಭ್ಯಾಸ ಮಾಡುತ್ತಿರಬೇಕು. ಈ ಮನಸ್ಸನ್ನು ಪರಿಶುದ್ಧವಾದ ಸದ್ಗುಣಗಳ ಮೂಲಕ ಪವಿತ್ರಗೊಳಿಸಿ ಏಕಾಗ್ರತೆಯನ್ನಿರಿಸಲು ಅಭ್ಯಾಸ ಮಾಡಬೇಕು. ಮನಸ್ಸು ಪರಿಶುದ್ಧವಿಲ್ಲದೆ ಏಕಾಗ್ರತೆಯು ವ್ಯರ್ಥ. ಕೆಲವು ಗಹನ ವಿಚಾರಗಳಿಗೆ ಹೆಚ್ಚಿನ ಏಕಾಗ್ರತೆಯಿರುತ್ತದೆ. ಆದರೆ ಅವರ ನಡತೆಯು ಕೆಟ್ಟದು. ಈ ಕಾರಣದಿಂದಲೇ ಅವರು ಅಧ್ಯಾತ್ಮ ಮಾರ್ಗದಲ್ಲಿ ಯಾವ ಪ್ರಗತಿಯನ್ನೂ ಮಾಡಲಾರರು.

ಅಮೂಲ್ಯವಾದ ಸಂಜೀವಿನಿ ಶಕ್ತಿಯಂತಿರುವ ವೀರ್ಯವನ್ನು ಕಾಪಾಡಿದವನಿಗೆ ಅದ್ಭುತವಾದ ಏಕಾಗ್ರತಾ ಶಕ್ತಿಯಿರುವುದು. ಯಾವಾತನು ಇಂದ್ರಿಯಗಳನ್ನು ವಿಷಯಗಳಿಂದ ಹಿಂದಕ್ಕೆಳೆದುಕೊಂಡು ಸ್ವಾಧೀನ ಪಡಿಸಿಕೊಂಡಿರುವನೋ ಆತನಿಗೆ ಹೆಚ್ಚಿನ ಏಕಾಗ್ರತೆ ಬರುವುದು. ಇದಕ್ಕಾಗಿ ನಾವು ಅನುಕ್ರಮವಾಗಿ ಒಂದೊಂದೇ ಮೆಟ್ಟಲನ್ನು ಏರುತ್ತಾ ಏರುತ್ತಾ ಹೋಗಲು ಅಭ್ಯಾಸ ಮಾಡಬೇಕು. ಪ್ರಾರಂಭದಲ್ಲಿ ಸದ್ಗುಣ, ನಡತೆ, ನಿಯಮಿತವಾದ ಉಸಿರಾಟ, ಆಸನ ಸಂಬಂಧ ಅನುಭವ, ಶೂನ್ಯ ಮನಸ್ಸು ಇತ್ಯಾದಿ ಅಡಿಗಲ್ಲನ್ನು ಹಾಸುತ್ತಾ ಹೋಗಬೇಕು. ಹೀಗೆ ಅಭ್ಯಾಸ ಮಾಡುತ್ತಾ ಹೋದರೆ ಆ ಬಳಿಕ ಮೇಲಿನ ಕಟ್ಟಡವಾದ ಏಕಾಗ್ರತೆಯು ಜಯಪ್ರದವಾಗಿ ನಿರ್ಮಿಸಲ್ಪಡುವುದು.

ಮನಸ್ಸನ್ನು ಏಕಾಗ್ರತೆಯಲ್ಲಿರಿಸುವ ವಸ್ತುವು ಒಂದು ವೇಳೆ ಅಲ್ಲಿರದಿದ್ದರೂ, ಸ್ಪಷ್ಟವಾಗಿ ಕಲ್ಪಿಸಲು ನಮಗೆ ಸಾಧ್ಯವಾಗುವುದು. ಒಂದೇ ಕ್ಷಣದ ಅವಲೋಕನದಿಂದ ನಾವು ನಮ್ಮ ಮಾನಸಿಕ ಚಿತ್ರಣವನ್ನು ನಿರ್ಮಿಸಲು ಶಕ್ತರಾಗಬೇಕು. ನಮಗೆ ಉತ್ತಮ ಏಕಾಗ್ರತೆಯು ಇದ್ದುದಾದರೆ ಬಹುಸುಲಭದಲ್ಲಿಯೇ ಇದು ಸಾಧ್ಯವಾಗುವುದು.

ಮೊದಲಿನ ಅಭ್ಯಾಸದ ಪ್ರಥಮ ಹೆಜ್ಜೆಯಲ್ಲಿ ಗಡಿಯಾರದ ಟಿಕ್-ಟಿಕ್ ಶಬ್ದದ ಕಡೆಗೆ ಅಥವಾ ಮೇಣಬತ್ತಿಯ ದೀಪದ ಕಡೆಗೆ ಚಿತ್ತವನ್ನು ನೆಲೆಗೊಳಿಸಬಹುದು. ಇದು ಸಾಕಾರವಾದ ಏಕಾಗ್ರತೆಯು. ಮನಸ್ಸಿಗೆ ನೆಲೆ ನಿಲ್ಲಲು ಏನಾದರೂ ಇಲ್ಲದಿದ್ದರೆ ಏಕಾಗ್ರತೆಯು ತಪ್ಪಿಹೋಗುತ್ತದೆ. ಯಾವುದಾದರೂ ನಮ್ಮ ಮನಸ್ಸಿಗೆ ಒಪ್ಪುವ, ಮೆಚ್ಚುವ, ವಸ್ತುವಿನ ಮೇಲೆ ಅದು ಸುಲಭದಲ್ಲಿಯೇ ಐಕ್ಯಗೊಳ್ಳುವುದು. ಮನಸ್ಸು ಮೆಚ್ಚದ ವಿಷಯದ ಕಡೆಗೆ ಅದನ್ನು ಏಕಾಗ್ರತೆಯಲ್ಲಿರಿಸಲು ಪ್ರಯತ್ನಿಸುವುದು ಪ್ರಥಮ ಹೆಜ್ಜೆಯಲ್ಲಿ ಅತ್ಯಂತ ಕಠಿಣವಾಗಿದೆ.

ಏಕಾಗ್ರತೆಯ ಸಾಧನ ಸಮಯದ ಆರಂಭದಲ್ಲಿ ಪದ್ಮಾಸನ-ವ-ಪಲ್ಯಂಕಾಸನದಲ್ಲಿ ಕುಳಿತು ನಮ್ಮ ಕಣ್ಣಿನ ದೃಷ್ಟಿಯನ್ನು ಮೂಗಿನ ಬುಡದಲ್ಲಿ ಅಂದರೆ ಎರಡು ಕಣ್ಣುಗಳೂ ಮೂಗೂ ಸಂಧಿಸುವ ಕಡೆಗೆ ಹರಿಸ(ಇಡ)ಬೇಕು. ಈ ಕ್ರಮಕ್ಕೆ"ನಾಸಿಕಾಗ್ರದೃಷ್ಟಿ" ಅಥವಾ"ನಾಸಿಕನೋಟ" ಎಂದು ಹೆಸರು. ಈ ಸಮಯ ಮನಸ್ಸಿಗೆ ಯಾವ ಕಾರಣದಿಂದಲೂ ವೇದನೆಯಾಗುವ ಪ್ರಯತ್ನ ಮಾಡಬಾರದು. ಮೆಲ್ಲಮೆಲ್ಲನೆ ಮೂಗಿನ ಬುಡಕ್ಕೆ ದೃಷ್ಟಿಯನ್ನಿರಿಸಬೇಕು. ಕೆಲವರು ಮೂಗಿನ ತುದಿಗೆ ದೃಷ್ಟಿ ಹರಿಸಬೇಕೆಂದು ಹೇಳುವರು. ಆದರೆ ಈ ಎರಡೂ ಕ್ರಮಗಳು ಸರಿಯೆಂದೇ ಒಪ್ಪಬೇಕಾಗುತ್ತದೆ.

ಮೊದಲಿಗೆ ಒಂದು ಮಿನಿಟು ಕಾಲ ಈ ಅಭ್ಯಾಸವನ್ನು ಮಾಡಬೇಕು. ಕ್ರಮೇಣ 10-20-30 ಮಿನಿಟುಗಳ ತನಕ ಮತ್ತೆ ಒಂದು ಗಂಟೆಯ ತನಕ ಅಭ್ಯಾಸ ಮಾಡಬೇಕು. ಹೀಗೆ ಮಾಡಿದರೆ ಈ ಅಭ್ಯಾಸದಿಂದ ಚಿತ್ತವನ್ನು ಸ್ಥಿರಗೊಳಿಸಿ ಸ್ವಾಧೀನದಲ್ಲಿರಿಸಿಕೊಳ್ಳಲು ಸಹಾಯವಾಗುತ್ತದೆ. ಇದು ಏಕಾಗ್ರತೆಯ ಶಕ್ತಿಯನ್ನು ಹೆಚ್ಚಿಸುವುದು. ಇದೇ ಅಭ್ಯಾಸವನ್ನು ನಾವು ದಾರಿಯಲ್ಲಿ ನಡೆಯುತ್ತಿರುವಾಗಲೂ ಮಾಡುತ್ತಿರಬಹುದು.

ನಾವು ಧ್ಯಾನಕ್ಕೆ ಕೂತುಕೊಳ್ಳುವ ಕೋಣೆಯಲ್ಲಿ ವ, ನಿರ್ಜನ ಪ್ರದೇಶದಲ್ಲಿ ಪದ್ಮಾಸನ ವ, ಪಲ್ಯಂಕಾಸನದಲ್ಲಿ ಕುಳಿತು ಹುಬ್ಬುಗಳ

ಮಧ್ಯೆ ಮೂಗಿನ ಬುಡದಲ್ಲಿ ದೃಷ್ಟಿಯನ್ನಿರಿಸಲು ಮೊದಲು ಅರ್ಧ ಮಿನಿಟು ಮಾತ್ರ ಯತ್ನಿಸಬೇಕು. ಆ ಮೇಲೆ ಅರ್ಧ ಗಂಟೆಯ ತನಕ ಹೆಚ್ಚಿಸಬೇಕು. ಈ ಅಭ್ಯಾಸದಲ್ಲಿ ಸ್ವಲ್ಪವೂ ನೋವು ಬೇಸರ ಉಂಟಾಗ ಬಾರದು. ಈ ರೀತಿಯ ಸಾಧನೆಯಿಂದ ಮನಸ್ಸಿನ ಚಂಚಲತೆ ಅಥವಾ ಅಶಾಂತಿಯನ್ನು ದೂರಮಾಡಿ ಏಕಾಗ್ರತೆಯನ್ನು ದೃಢಗೊಳಿಸಲು ಸಹಾಯವಾಗುವುದು.

ನಮ್ಮ ಏಕಾಗ್ರತೆಯನ್ನು ಹೆಚ್ಚಿಸಲು ಬಯಸಿದುದಾದರೆ ಬಾಹ್ಯ ಪ್ರಪಂಚದ ಕಡೆಗೆ ಹೆಚ್ಚಿನ ಆಸಕ್ತಿಯನ್ನಿರಿಸಬಾರದು. ನಾವು ಇದಕ್ಕಾಗಿ ಮೌನವ್ರತವನ್ನು ದಿನದಲ್ಲಿ ಎರಡು ಗಂಟೆಯಾದರೂ ಆಚರಿಸಿದರೆ ಒಳ್ಳೆಯದು.

ಏಕಾಗ್ರತೆಯ ವಿಷಯದಲ್ಲಿ ಮನಸ್ಸು ತನ್ಮಯವಾಗಿ ಐಕ್ಯಗೊಳ್ಳುವ ವರೆಗೂ ಈ ಸಾಧನೆಯನ್ನು ಮಾಡುತ್ತಿರಬೇಕು. ನಮ್ಮ ಮನಸ್ಸು ಆ ವಸ್ತುವಿನಿಂದ ಅನ್ಯ ವಿಷಯದ ಕಡೆಗೆ ಚಲಿಸಿದ ಕೂಡಲೆ ಅದನ್ನು ಹಿಂದಕ್ಕೆ ಅಲ್ಲಿಯೇ ಅಂದರೆ ಮೊದಲಿನ ಜಾಗದಲ್ಲಿಯೇ ನಿಲ್ಲಿಸಬೇಕು.

ಏಕಾಗ್ರತೆಯು ಸ್ಥಿರವಾಗಿ ನಿಂತಾಗ ಇಂದ್ರಿಯಗಳು ಚಲಿಸ ಲಾರವು. ಪ್ರತಿನಿತ್ಯ ಗಂಟೆ ಒಂದರಿಂದ ಮೂರರತನಕ ಮನಸ್ಸನ್ನು ಏಕಾಗ್ರತೆಯಲ್ಲಿರಿಸಲು ಶಕ್ತನಾದವನಿಗೆ, ಅದ್ಭುತ ಮಾನಸಿಕ ಶಕ್ತಿಯು ಲಭಿಸುವುದು. ಮತ್ತು ಅವನಿಗೆ ಪ್ರಬಲವಾದ ಸಂಕಲ್ಪ ಶಕ್ತಿಯು ಕೂಡಾ ದೊರೆಯುವುದು. ಧ್ಯಾನ ಮಾಡುವ ಅಭ್ಯಾಸದಲ್ಲಿ ಮನಸ್ಸು ನಮ್ಮ ಹಿಡಿತದಿಂದ ಜಾರಿದರೂ ನಾವು ಗಾಬರಿಗೊಳ್ಳಬಾರದು. ಮನ ಸ್ಸನ್ನು ಹಾಗೆಯೇ ಓಡಲು ಬಿಡಬೇಕು, ಬಳಿಕ ಮೆಲ್ಲನೆ ಅದನ್ನು ಏಕಾ ಗ್ರತೆಯ ಕಡೆಗೆ ತಂದಿರಿಸಲು ಪ್ರಯತ್ನಿಸಬೇಕು. ಸತತ ಅಭ್ಯಾಸ ಕ್ರಮದಿಂದ ಮನಸ್ಸು ಹೃದಯದಲ್ಲಿ ಅಥವಾ ಅಂತರಾತ್ಮನಲ್ಲಿಯೇ ನೆಲೆಗೊಳ್ಳುವುದು.

ಪ್ರಾರಂಭದಲ್ಲಿ ನಮ್ಮ ಮನಸ್ಸು 80 ಸಲ ಓಡಬಹುದು. ಆರು ತಿಂಗಳ ಪ್ರಯತ್ನದಿಂದ 70 ಸಲ ಓಡಬಹುದು. ಒಂದು ವರ್ಷದ

ಅಭ್ಯಾಸದಿಂದ 50 ಸಲವೂ, 2 ವರ್ಷದೊಳಗೆ 30 ಸಲವೂ, 5 ವರ್ಷ ದೊಳಗೆ ಅದು ಸಂಪೂರ್ಣ ಅಂತರಾತ್ಮನಲ್ಲಿಯೇ ವಿಲೀನಗೊಳ್ಳುವುದು.

ಆ ಮೇಲೆ ನಾವು ಎಷ್ಟು ಶ್ರಮಿಸಿದರೂ ಅದು ಅನ್ಯ ವಿಷಯಗಳ ಕಡೆಗೆ ಓಡಲಾರದು. ಅಲೆದಾಡುವ ಎತ್ತು ಮೊದಲು ನೆರೆಕರೆಯ ತೋಟಗಳಲ್ಲಿ ಮೇಯುತ್ತಿದ್ದರೂ, ತನ್ನ ನಿವಾಸಸ್ಥಾನದಲ್ಲಿಯೇ ಉತ್ತಮ ತಿಂಡಿ-ಹಸುರುಹುಲ್ಲು ದೊರೆತಾಗ ಅಲ್ಲಿಯೇ ನಿಲ್ಲುವಂತೆ ಮನಸ್ಸು ಕೂಡಾ ನಮ್ಮ ಅವಿಶ್ರಾಂತ ಶ್ರಮ-ಸಾಧನೆಯಿಂದಾಗಿ, ಕೊನೆಗೆ ಅಂತ ರಾತ್ಮನಲ್ಲಿಯೇ ಐಕ್ಯಗೊಳ್ಳುವುದು.

## ಸದ್ಗುಣ — ದುರ್ಗುಣ

ಸದ್ಗುಣ ಎಂದರೆ ಪುಣ್ಯ ಅಥವಾ ಒಳ್ಳೆಯತನ, ಅದೇ ಧರ್ಮ.

ದುರ್ಗುಣವೆಂದರೆ ಪಾಪ, ದುಷ್ಕರ್ಮ ಅಥವಾ ಅಧರ್ಮ.

ಈ ಧರ್ಮವೆಂಬುದು ಕೆಲವೊಂದುಬಾರಿ ಅಧರ್ಮವಾಗಿ ಪರಿ ಣಮಿಸುವುದೂ ಉಂಟು. ಕೆಲವು ಕಡೆಯಲ್ಲಿ ಧರ್ಮವಾಗಿ ತೋರಿ ದುದೇ ಬೇರೆ ಕಡೆಗೆ ಅಧರ್ಮವಾಗುವುದೂ ಉಂಟು. ಒಬ್ಬನಿಗೆ ಧರ್ಮವಾದುದೇ ಇನ್ನೊಬ್ಬನಿಗೆ ಅಧರ್ಮವೆಂದಾಗುವುದು.

ಯಾವುದರಿಂದ ನಮ್ಮ ಏಳಿಗೆಯಾಗಿ ಲೌಕಿಕಸಂಪತ್ತೂ, ಶ್ರೇಯಸ್ಸೂ, ಅಭಿವೃದ್ಧಿ ಹೊಂದಿ, ಮೋಕ್ಷ ಪ್ರಾಪ್ತಿಯಾಗುತ್ತದೋ ಅದೇ ಸದ್ಗುಣ. ಯಾವುದು ಮಾನವನನ್ನು ಅಧಃಪತನದ ರಸಾ ತಲಕ್ಕೆ ದೂಡುವುದೋ ಅದು ದುರ್ಗುಣ.

ಬದ್ಧಾತ್ಮನಾದ ನಮ್ಮನ್ನು ಶುದ್ಧಾತ್ಮ (ಪರಮಾತ್ಮ) ನಾಗಲು ಸಹಕಾರಿಯಾಗುತ್ತದೋ ಅದು ಸದ್ಗುಣ. ಯಾವುದು ನರಕದ

ಕಡೆಗೆ ಎಳೆಯುತ್ತದೋ ಅದು ದುರ್ಗುಣ. ನಮಗೆ ಸಂತೋಷ-ಸನ್ಮಾನ ಮತ್ತು ಯಶಸ್ಸುಗಳನ್ನು ಕೊಡುವಂತಹದ್ದು ಸದ್ಗುಣ. ದುಃಖ, ದುಷ್ಕೀರ್ತಿ ಮತ್ತು ಅಪಯಶಸ್ಸನ್ನುಂಟು ಮಾಡುತ್ತದೋ ಅದು ದುರ್ಗುಣ. ಮನುಷ್ಯನನ್ನು ಸಾತ್ವಿಕನನ್ನಾಗಿ ಮಾಡುವುದು ಸದ್ಗುಣ. ಅವನನ್ನು ತಾಮಸಿಕನನ್ನಾಗಿ ಮಾಡುವುದು ದುರ್ಗುಣ. ಶಕ್ತಿ-ಸ್ಫೂರ್ತಿ — ಶಾಂತಿಯನ್ನೊದಗಿಸುವುದು ಸದ್ಗುಣ, ದೌರ್ಬಲ್ಯ ನಿರಾಶೆ, ಅಶಾಂತಿಯನ್ನೊದಗಿಸುವುದು ದುರ್ಗುಣ.

ಸಾಧು-ಸಂತರ-ಸತ್ಪುರುಷರ, ಸತ್ಸಂಗದಲ್ಲಿರುವುದು ಸದ್ಗುಣ, ಇದು ಸಂಪಾದನೆಗೆ ಹೆದ್ದಾರಿಯಾಗಿದೆ. ದುಶ್ಚರಿತರಾದ, ದುರ್ವ್ಯಸನಿಗಳು ಕೂಡಾ ಸದಾಚಾರಿಗಳ ಸಂಪರ್ಕದಿಂದಿದ್ದರೆ, ಉತ್ತಮರಾಗುತ್ತಾರೆ....



# ಶ್ರೀ ವರಂಗ ಜೈನಮಠ. ದ.ಕ. ಜಿಲ್ಲೆ (ಕರ್ನಾಟಕ)

## ಪ್ರಕಟಣೆ

ಪರಮ ಪೂಜ್ಯ ಸ್ವಸ್ತಿಶ್ರೀ ಪಾರ್ಶ್ವಕೀರ್ತಿ ಸ್ವಾಮಿಗಳವರು 21-9-1978 ರಂದು ವರಂಗ ಶ್ರೀ ಜೈನಮಠದಲ್ಲಿ ಸಲ್ಲೇಖನ ಪೂರ್ವಕ ಪರಂಧಾಮವನ್ನೈದ ವಿಚಾರ ಎಲ್ಲಾ ಶ್ರಾವಕಶ್ರಾವಿಕೆಯರಿಗೆ ತಿಳಿದೇ ಇದೆ. ಪೂಜ್ಯ ಸ್ವರ್ಗೀಯ ಮಹಾಸ್ವಾಮಿಗಳವರ ಪವಿತ್ರಾತ್ಮನಿಗೆ ಚಿರಶಾಂತಿಯು ಪ್ರಾಪ್ತವಾಗಲೆಂದು ಭಗವಾನ್ ಶ್ರೀ ನೇಮೀಶ್ವರ ಸ್ವಾಮಿ ಸನ್ನಿಧಿಯಲ್ಲಿ ಪ್ರಾರ್ಥಿಸುತ್ತೇನೆ.

ಪೂಜ್ಯ ಮಹಾಸ್ವಾಮಿಗಳವರು ದೈವಾಧೀನರಾಗುವಾಗ ಅವರ ಹೆಸರಿನಲ್ಲಿ ಬೇರೆ ಬೇರೆ ಬ್ಯಾಂಕುಗಳಲ್ಲಿ ಇದ್ದ ಹಣ ಮತ್ತು ಅವರಲ್ಲಿ ನಗ್ದಿಯಾಗಿ ಇದ್ದ ಹಣದ ವಿವರಗಳು ಈ ಕೆಳಗಿನಂತೆ ಇದೆ.

**A** ವರಂಗ ಸಹಕಾರೀ ವ್ಯವಸಾಯಿಕ ಬ್ಯಾಂಕ್‌ನಲ್ಲಿ

| | | | |
|---|---|---|---|
| (1) | F.D.R. No. 106/ 27 8-76 (Due date 27-8-77) | Rs. | 100-00 |
| (2) | F.D.R. No. 116/ 25-11-77 (Due date 25-12-78) | Rs. | 1000-00 |
| (3) | F.D.R. No. 009/ 14-8-78 (Due date 14-8-79) | Rs. | 1000-00 |
| (4) | S.B.A/c. No. NM 63.............................. | Rs. | 8-40 |

**B** ಕರ್ನಾಟಕ ಬ್ಯಾಂಕ್ ಲಿ., ಹುಮ್ಮಚ ಶಾಖೆ ಇದರಲ್ಲಿ :

| | | | |
|---|---|---|---|
| (1) | F.D.A/c. No. 23/78 (Due date 4-4-79) | Rs. | 200-00 |
| | F.D.A/c. No. 52/78 (Due date 17-7-79) | Rs. | 100:00 |

**C** ಅವರಲ್ಲಿದ್ದ ನಗ್ದಿ ಹಣ (ದಿ. 21-9-78ರಂದು) Rs. 52-03

ಮೇಲ್ಕಾಣಿಸಿದ ವಿವರಗಳ ಪೈಕಿ ವರಂಗ ಸಹಕಾರೀ ವ್ಯವಸಾಯಿಕ ಬ್ಯಾಂಕ್‌ನಲ್ಲಿ ಇರುವ ಹಣವನ್ನು ತನ್ನ ಅವಸಾನದ ನಂತರ ಪರಮಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಮಹಾಸ್ವಾಮಿಗ

P.T.O.

ಳಿಗೆ ಕೊಡತಕ್ಕದ್ದೆಂದು ಪರಮಪೂಜ್ಯ ಸ್ವರ್ಗೀಯ ಮಹಾಸ್ವಾಮಿಗಳವರು ತಮ್ಮ ಜೀವಿತ ಕಾಲದಲ್ಲೇ ಸದ್ರಿ ಬ್ಯಾಂಕಿನ ಆಡಳಿತ ವರ್ಗಕ್ಕೆ ಬರಹ ಮೂಲಕ ತಿಳಿಸಿದ್ದರು. ಆ ಪ್ರಕಾರ ವರಂಗ ಸಹಕಾರೀ ವ್ಯವಸಾಯಿಕ ಬ್ಯಾಂಕ್‌ನಲ್ಲಿ ಇರುವ ಹಣವನ್ನು ಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಮಹಾಸ್ವಾಮಿಗಳವರು (ವಾಯಿದೆ ಆದ ನಂತರ) ತೆ ಯಲು ಪ್ರಯತ್ನಿಸುವರು, ಹೀಗೆ ಮೇಲೆ ಹೇಳಿದ ಬ್ಯಾಂಕ್‌ನಿಂದಬಡ್ಡಿ ಸಮೇತ ಪಡೆದ ಹಣ ಮತ್ತು ಅವರಲ್ಲಿದ್ದ ನಗ್ದು ಹಣ Rs. 52-03 ಇವೆಲ್ಲವನ್ನೂ ಒಟ್ಟುಮಾಡಿ ಮುಂದೆ ಪೂಜ್ಯ ಸ್ವರ್ಗೀಯ ಸ್ವಸ್ತಿಶ್ರೀ ಪಾರ್ಶ್ವಕೀರ್ತಿ ಮಹಾಸ್ವಾಮಿಗಳ ಹೆಸರಿನಲ್ಲಿ ನಡೆಯಬಹುದಾದ ಯಾವುದಾದರೂ ಧರ್ಮಕಾರ್ಯಕ್ಕೆ ವಿನಿಯೋಗಿಸಬೇಕೆಂದು ಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಮಹಾಸ್ವಾಮಿಗಳವರು ತೀರ್ಮಾನಿಸಿರುತ್ತಾರೆ. ಈ ವಿಚಾರದಲ್ಲಿ ಪೂಜ್ಯ ಮಹಾಸ್ವಾಮಿಗಳವರು ಕೈಗೊಂಡ ತೀರ್ಮಾನವನ್ನು "ಗುರುದೇವ" ಮಾಸ ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಸ್ವರ್ಗೀಯ ಪೂಜ್ಯ ಸ್ವಸ್ತಿಶ್ರೀ ಪಾರ್ಶ್ವಕೀರ್ತಿ ಮಹಾಸ್ವಾಮಿಗಳವರು ತಮ್ಮ ಅಂತಿಮ ದಿನಗಳಲ್ಲಿ ಸ್ವಾಧ್ಯಾಯಕ್ಕಾಗಿ ಉಪಯೋಗಿಸುತ್ತಿದ್ದ ಶಾಸ್ತ್ರ ಗ್ರಂಥಗಳನ್ನು ಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಮಹಾಸ್ವಾಮಿಗಳವರು ಸ್ವಾಧ್ಯಾಯ ಪ್ರಿಯರಾಗಿರುವ ಶ್ರಾವಕ, ಶ್ರಾವಿಕೆಯರಿಗೆ ದಾನಮಾಡಿರುತ್ತಾರೆ.

ಅವರು ಉಪಯೋಗಿಸುತ್ತಿದ್ದ ಪಿಂಛ, ಕಮಂಡಲುಗಳನ್ನು ಸ್ಮರಣಾರ್ಥವಾಗಿ ಶ್ರೀ ವರಂಗ ಮಠದಲ್ಲಿ ಇಟ್ಟಿರಲು ಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿಭಟ್ಟಾರಕ ಮಹಾಸ್ವಾಮಿಗಳವರು ಆಜ್ಞಾಪಿಸಿರುತ್ತಾರೆ.

ವರಂಗ ಜೈನ ಮಠ
ದಿ. 3-10-78

ಪಿ. ಬಹ್ಮಸೂರಯ್ಯ
ಏಜೆಂಟ್, ಶ್ರೀ ವರಂಗ ಜೈನಮಠ (ದ.ಕ)

# ಅಂತರಾತ್ಮ ದರ್ಶನದ ಸಾರ

ಪಂಚಪರಮೇಷ್ಠಿಗಳಿಂದಧಿಕ ದೈವಗಳಿಲ್ಲ ।
ಪಂಚನಮಸ್ಕಾರಕ್ಕಿಂತ ಮೇಲು ಮಂತ್ರಗಳಿಲ್ಲ ॥
ಪಂಚವೃತಗಳಿಗಿಂತ ಅಧಿಕ ವ್ರತಗಳಿಲ್ಲ ।
"ಪಂಚಾಕ್ಷರೀ" ಮಂತ್ರಕ್ಕೆ ಎದುರೆಂಬುದೇ ಇಲ್ಲ ॥ ೧ ॥

ದಿನಕ್ಕೊಂದು ಘಳಿಗೆಯಾನುಂ ।
ಜಿನನಾಕಾರದೊಳು ತನ್ನ ನಿಜಮಂ ಕಾಣ್ಬಗೆ ॥
ಜನಿಸಿದ ಕರ್ಮಸಮೂಹಂ ।
ದಿನಕರನುದಯದೊಳುಪರಿವ ಕತ್ತಲೆಗೆ ಸಮಂ ॥ ೨ ॥

ಶುದ್ಧ ಸ್ಪಟಿಕದ ಶಿಲೆಯೊಳ್ ।
ತಿದ್ದಿದ ಜಿನಬಿಂಬದಂತೆ ತನ್ನಂಗದೊಳುಂ ॥
ಶುದ್ಧಾತ್ಮನನ್ನು ಭಾವಿಸೆ ।
ಒದ್ಧಗಳಾಗಿರ್ದ ಕರ್ಮವಾಗಲೆ ಕೆಡುಗರಿಂ ॥ ೩ ॥

ಎಂದೆಂಗು ಕುಂದಿಲ್ಲದ ।
ಬೃಂದಾರಕವಂದ್ಯ ವೀತರಾಗ ನಿಜಾತ್ಮನ ॥
ನೊಂದೆರಡು ಘಳಿಗೆ ನೆನೆದರೆ ।
ಸಂದಮರೀಕ್ರೀಡೆಯಲ್ಲಿ ಚಿನ್ಮಯನಕ್ಕುಂ ॥ ೪ ॥

ತನುಬೇರಾತ್ಮನು ಬೇರೆಂ ।
ದನವರತಂ ನಡೆವ ನುಡಿವ ಸಡಗರದೆಡೆಯೊಳ್ ॥
ಮನದೊಳ್ ಚಿಂತಿಸುವಾತನ ।
ಘನತರ ಕರ್ಮಗಳಿಗೆಲ್ಲ ನಿರ್ಜರೆಯಕ್ಕುಂ ॥ ೫ ॥

ಒಂದು ಕ್ಷಣ ಕುಳಿತಾದೊಡೇ ।
ನಿಂದಾದೊಡೆ ಶುದ್ಧತತ್ವಮಂ ಚಿಂತಿಸುವಂ ॥
ಮಂಧನು ಜಡನಾದೊಡೆಯೆಂ ।
ದೆಂದೆಂದಿಗು ಕೆಡದ ಸೌಖ್ಯ ತಪ್ಪದೆ ಬಕ್ಕುಂ ॥ ೬ ॥

# ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ

ಶ್ರೀ ಹೊಂಬುಜ ಜೈನಮಠ,
ಶಿವಮೊಗ್ಗ ಜಿಲ್ಲೆ — ಕರ್ನಾಟಕ.

ಅಧ್ಯಕ್ಷರು ಮತ್ತು ಪ್ರಧಾನ ಸಂಪಾದಕರು:

ಪರಮಪೂಜ್ಯ
ಸ್ವಸ್ತಿ ಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಮಹಾಸ್ವಾಮಿಗಳವರು
ಶ್ರೀ ಹೊಂಬುಜ ಜೈನಮಠ

ಸಂಪಾದಕರು:

ವಿದ್ಯಾವಾಚಸ್ಪತಿ ಶ್ರೀ ವರ್ಧಮಾನ ಪಾರ್ಶ್ವನಾಥ ಶಾಸ್ತ್ರಿಗಳು
ಸೊಲ್ಲಾಪುರ

ಪಂಡಿತ್ ಎಸ್. ಪಿ. ಪದ್ಮಣ್ಣ, ಶ್ರವಣಬೆಳಗೊಳ

ರಾಮಚಂದ್ರ ಸ್ಯಾದ್ವಾದಿ, ತುಮಕೂರು

ಸಂಚಾಲಕರು:

ಏಜಂಟ್, ಶ್ರೀ ಹೊಂಬುಜ ಜೈನಮಠ

ಸಂರಕ್ಷಕರು:

ಶ್ರೀ ಬಿ. ಟಿ. ಕಸ್ತೂರಿ,
ರವಿವಾರಪೇಟೆ ಗೋಕಾಕ್, ಬೆಳಗಾಂ ಜಿಲ್ಲೆ